# ಉಡುಪಿ ದರ್ಶನ



ವಿದ್ಯುದ್ದೀಪಾಲಂಕೃತ ಉಡುಪಿ ಬ್ರಹ್ಮರಥ

ವಾಣೀ ಪ್ರಕಾಶನ

ಬೆಲೆ: 80 ಪೈಸೆ

# ಲಕ್ಷ್ಮೀ ಕಾಫಿ

( ರಿಜಿಸ್ಟರ್ಡ್ )

## ದಕ್ಷಿಣ ಭಾರತದ ಶ್ರೇಷ್ಠ ತಯಾರಿಕೆ

—: ತಯಾರಕರು :—

ಕೆ. ಕೆ. ಶ್ಯಾನುಭಾಗ್ & ಸನ್ಸ್

## ಲಕ್ಷ್ಮೀ ಕಾಫಿ ವರ್ಕ್ಸ್

ಉಡುಪಿ, ದ. ಕ.

# ಉಡುಪಿ ದರ್ಶನ

III

ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ॥
ವೇದ ಶಾಸ್ತ್ರಾತ್ಪರಂ ನಾಸ್ತಿ ನದೈವಂ ಕೇಶವಾತ್ಪರಂ

ಸಂಪುಟ ೪ ] ವಿರೋಧಿಕೃತ್ 1971 ನವಂಬರ [ ಸಂಚಿಕೆ ೩

ಸಂಪಾದಕರು:
ಹಂಡೆ ಗುರು ವೇದವ್ಯಾಸ ದಾಸರು
ಕೀರ್ತನಾಲಂಕಾರ-ಧರ್ಮಪ್ರಚಾರಕ.

ಪೋಷಕರು:
ಡಿ. ವೀರೇಂದ್ರ ಹೆಗ್ಗಡೆ
ಧರ್ಮಾಧಿಕಾರಿ ಧರ್ಮಸ್ಥಳ

ಎಮ್. ಮಧ್ವರಾಜ ಬಿ. ಎ.
ಪ್ರೊಪ್ರೈಟರ್
ಕಾರೋನೆಟ್ ಕ್ಯಾನಿಂಗ್ ಕಂ., ಮಲ್ಪೆ.

ಪ್ರಕಾಶಕರು:
ವಾಣೀ ಪ್ರಕಾಶನ
ಕೆರೆಮಠ, ಪೋಸ್ಟ್ ಕ್ರೋಡಾಶ್ರಮ, ಉಡುಪಿ, ದ. ಕ.



ಕುಂಡಲಮಂಡಿತಗಂಡಂ ಕಂಬುಗ್ರೀವಂ ಮನೋರಮೋರಸ್ಕಂ ।
ದಂಡಂ ದಾಮಚ ದಧತಂ ಪಾಂಡವಸಖಮರ್ಚಯಾಮಿ ಕದಾ ॥
ಮಧ್ವಪ್ರತಿಷ್ಠಿತಂ ತ್ವಾಂ ವಿಧ್ವಸ್ತಾಶೇಷ ಕುಜನಕುಲಂ ।
ಮೂರ್ಧ್ನಾ ಪ್ರಣಮ್ಯ ಯಾಚೇ ತದ್ವಿರಚಯ ಯದ್ಧಿತಂ ಮಮಾದ್ಯಹರೇ॥

—ಶ್ರೀ ವಾದಿರಾಜರು

## ನಾಂದಿ

ದ್ರೌಪದಿಯ ಭಯವಪರಿಹರಿಸಿದವನಾರೈ ।
ಆಪರೀಕ್ಷಿತನ ಭವಭಂಜನನಾರೈ ।
ತಾಪಸರಿಗಸುರರಿಂದ ಬಂದ ಪರಿಪರಿಯ ॥
ಆಪತ್ತುಗಳನೆಲ್ಲ ಖಂಡಿಸಿದವನಾರೈ
ಶ್ರೀಪತಿ ಹಯವದನನೊಬ್ಬನೆ ತನ್ನವರ
ತಾಪತ್ರಯವ ಬಿಡಿಸಿ ತಕ್ಕೈಸಿ ಕೊಂಬ

—ಶ್ರೀಭಾವಿಸಮೀರ ಶ್ರೀ ವಾದಿರಾಜರು

### ಶ್ರೀ ಪರಶುರಾಮ ದೇವರು:

ನಮ ಉಕ್ರಾಂತು ಭೂಯಿಷ್ಠಾಂ ವಿಧೇಮ ಜಗತಾಂ ಪತೇ ।
ಸಿವಾಗಯ್ಯೈನೋ ಭಗವನ್ನಗ್ನಿಮೂರ್ತೇ ನಮೋನಮಃ ॥ ೧ ॥

—ರಜತಪೀಠಪುರ ಮಾಹಾತ್ಮ್ಯದಿಂದ ೨॥೫॥

### ಶ್ರೀ ಮದನಂತಾಸನ ದೇವರು:

ಪೂರ್ವೇಽಪಿ ಕರ್ದಮ ಪರಾಶರ ಪಾಂಡುಮುಖ್ಯಾಃ ।
ಯತ್ಸೇವಯಾ ಗುಣಗಣಾಢ್ಯಮಪತ್ಯ ಮಾಪುಃ ॥
ತಂ ಪೂರ್ಣ ಸದ್ಗುಣತನುಂ ಕರುಣಾಮೃತಾಬ್ಧಿಂ ।
ನಾರಾಯಣಂ ಕುಲಪತಿಂ ಶರಣಂ ವ್ರಜೇಮ ॥

— ಶ್ರೀಮತ್ ಸುಮಧ್ವವಿಜಯ ಮಹಾಕಾವ್ಯದಿಂದ

### ಶ್ರೀ ಮಧ್ವರು

ತ್ರಿಧಾಮಾಯಸ್ಯಹೃತ್ಸೀಮ್ನಿ ಕೃತಧಾಮಾ ನಿರಂತರಂ
ಸುಧೀಶ್ರಿಯಂ ದಿಶತುನಃ ಸಮಧ್ವಃ ಕ್ಷೀರಸಾಗರಃ ।

—ಶ್ರೀ ಭಾವಿಸಮೀರ ವಾದಿರಾಜರು

### ಶ್ರೀ ವಾದಿರಾಜರು

ಓಂ ನಮೋ ವಾದಿರಾಜಾಯ ದೀರ್ಘದಾರಿದ್ರ್ಯ ಘಾತಿನೇ
ರಾಜಭೋಗ ಪ್ರದಾತ್ರೇಚ ನಮೋಽಸ್ತು ಜಯದಾಯಿನೇ ॥

—ಶ್ರೀವಾದಿರಾಜಕವಚದಿಂದ.

## ರಮೇಶನ ಮದುವೆಯೆ ?

**ನಾವೇಕೆ ಅವನಿಗೆ ಜೆಯಂಟ್ ಕ್ಯಾಶ್‌ಸರ್ಟಿಫಿಕೆಟ್‌ಗಳನ್ನು ನೀಡಬಾರದು?**
**ಸಿಂಡಿಕೇಟ್ ಬ್ಯಾಂಕ್ ನಿಂದ ನಾವೂ ಸಹ ಕೊಂಡಿದ್ದೇವೆಂದು**
**ನಿಮಗೆ ಗೊತ್ತಿದೆಯಷ್ಟೆ.**



ಮೊತ್ತವು ಚಕ್ರಬಡ್ಡಿಯಿಂದ ಬೆಳೆಯುವ ಉಡುಗೊರೆಯೊಂದು ಇಲ್ಲಿದೆ. ನಿಮಗೆ ಹೇಗೆ ಅನುಕೂಲವೋ ಹಾಗೆ ರೂ. 10, ರೂ. 100 ಹಾಗೂ ರೂ. 1000ದಮೊತ್ತದ ಸರ್ಟಿಫಿಕೆಟ್‌ಗಳನ್ನು ನೀವು ಪಡೆಯಬಹುದು.ಅವು ಭಾರತದಲ್ಲಿರುವ ನಮ್ಮೆಲ್ಲಾ ಶಾಖೆಗಳಲ್ಲಿ ದೊರೆಯುವವು.

| ಸರ್ಟಿಫಿಕೇಟ್‌ಗಳ ಮೊತ್ತ | 61 ತಿಂಗಳ ನಂತರ ದೊರೆಯುವ ಹಣ |
|---|---|
| ರೂ. 10 | ರೂ. 14.24 |
| ರೂ. 100 | ರೂ. 142.40 |
| ರೂ. 1000 | ರೂ. 1424.00 |




# ಸಿಂಡಿಕೇಟ್ ಬ್ಯಾಂಕ್

ಪ್ರಧಾನ ಕಚೇರಿ: ಮಣಿಪಾಲ, (ಮೈಸೂರು ರಾಜ್ಯ)

ಶಾಖೆಗಳು 500

ಕೆ. ಕೆ. ಪೈ
ಕಸ್ಟೋಡಿಯನ್

# ಉಡುಪಿ ಕೃಷ್ಣ ಸ್ತುತಿ

## ಶ್ರೀ ರಾಗ ಭಾಮಿನಿ ಷಟ್ಪದಿ.

ಇಂದ್ರ ಲೋಕವ ಪೋಲ್ಪ ದ್ವಾರಕಿ ।
ಯಿಂದ್ಧ ನಮ್ಮನು ಸಲಹಲೋಸುಗ ।
ಸಿಂಧುವಿನ ಮಾರ್ಗದಲಿ ತೌಳವ ಜನರ ದೇಶಕ್ಕೆ ॥
ಬಂದು ಮಧ್ವಾಚಾರ್ಯರಾ ಕೈ ।
ಯಿಂದ ಪೂಜೆಯ ಗೊಂಡ ಕೃಷ್ಣನ
ಮಂದ ಹಾಸದ ಮುದ್ದು ಮುಖ ಸೇವಿಪಗೆ ಸಂಪದವು ॥ ೧ ॥
ಒಂದು ಕರದಲಿ ನೇಣುನುರೆ ಮ ।
ತ್ತೊಂದರಲಿ ಕಡಗೋಲು ವರಮಣಿ ।
ಯಿಂದ ಶೋಭಿಪ ವಕ್ಷನಾಭಿಯ ತಾವರೆಯ ಅರಳು ॥
ಚಂದ್ರನಂದದಿ ವದನ ಸಮದಲಿ ।
ಸಿಂದಪಾದ ಮನೋಹರೋರು ।
ದ್ವಂದ್ವ ಕೃಷ್ಣನ ಮೂರ್ತಿನೋಳ್ಪರ ನಯನ ಸುಕೃತ ಫಲ ॥ ೨ ॥
ನಿತ್ಯದಲಿ ಗೋಘೃತದ ಮಜ್ಜನ ।
ಮತ್ತೆ ಸೂಕ್ತ ಸ್ನಾನ ತದನು ಪ ।
ವಿತ್ರ ನಾನಾ ಚಿತ್ರ ತರದಾ ಕಲಶದಭಿಷೇಕ ॥
ವಸ್ತ್ರ ಗಂಧ ವಿಭೂಷಣಂಗಳು ।
ವಿಸ್ತರಿಪ ಶ್ರೀ ತುಳಸಿ ಪುಷ್ಪದಿ ।
ಭಕ್ತಿ ಭರಿತರು ಮಾಡುವಾರಾಧನೆಯನೇನೆಂಬೆ ॥ ೩ ॥
ಸುತ್ತ ಸಪ್ತಾವರಣದರ್ಚನೆ ।
ವಿಸ್ತರಿಪ ಸ್ತೋತ್ರಗಳ ಗಾನ ವಿ ।
ಚಿತ್ರ ನವವಿಧ ಭಕ್ಷಭೋಜ್ಯ ಧೂಪ ದೀಪಗಳು ।
ರತ್ನದಾರತಿ ಬಹಳ ಸಂಭ್ರಮ ।
ಛತ್ರ ಚಾಮರ ನೃತ್ಯ ಗೀತಾ ।
ದ್ಯುತ ವಾದಿಗಳೊಪ್ಪಿಹವು ಈ ದೇವ ದೇವನಿಗೆ ॥ ೪ ॥
ಅಪ್ಪ ಮೊದಲಾದಮಲ ಭಕ್ಷ್ಯವ ।
ತುಪ್ಪ ಬೆರಸಿದ ಪಾಯಸವ ಸವಿ ।
ದೊಪ್ಪ ಶಾಕವ ಗುಡಗಳನು: ಕಂದರ್ಪನಪ್ಪನಿಗೆ ।

ಅರ್ಪಿಸುವರನು ದಿನದಿರಸ ಕೂ ।
ಡಿಪ್ಪ ಪಕ್ವ ಫಲಾದಿರವು ।
ಯಪ್ಪಿಕೊಂಡಿಪ್ಪಚ್ಯುತಗೆ ಪೂಜಿಸುವ ಯೋಗ್ಗಿಗಳು ॥ ೫ ॥
ಮೆರೆವ ದೀಪ ಸಹಸ್ರವಚ್ಯುತ ।
ನೆರಡು ಭಾಗದೊಳಿಂದ್ರನೀಲ ।
ಸ್ಫುರದಮಲ ಮಣಿಗಳಿಂ ಶೋಭಿಪ ದಿವ್ಯತೇಜದಲಿ ॥
ದುರಿತ ರಾಶಿಗಳವನ ಸೇವಾ ।
ನಿರತ ಸುಜನರ ತನುಮನಂಗಳ ।
ತೊರೆದಿಹವು ಸಿರಿನೆಲಸಿಹುದು ಕೃಷ್ಣನ ಮನೆಯ ಶೃಂಗಾರ ॥ ೬ ॥
ತೊಟ್ಟ ಭೂಷಣ ವಿಟ್ಟ ಮುಕುಟವ ।
ನುಟ್ಟ ಪಟ್ಟೆಯ ಬಿಟ್ಟ ದುರಿತವ ।
ಮುಟ್ಟಿ ತ್ರಿಗುಣವ ಕೊಟ್ಟ ನೀ ಶುಭವಾಕ್ಯಗಳ ನಮಗೆ ॥
ನಿಷ್ಠೆ ಸುಜನರು ತಟ್ಟನೇಮನ ।
ಮುಟ್ಟ ನೆನವರಿಗಿಷ್ಟವಖಿಳವ ।
ಕೊಟ್ಟು ಸಲಹುವ ಸೃಷ್ಟಿಯೊಳು ನೀನೆಷ್ಟೊ ಗುಣಪುಷ್ಟ ॥ ೭ ॥
ಏನನೆಂಬೆನು ಕೃಷ್ಣದೀನೋ ।
ದ್ಧಾರ ನೀನೆಂದಾದಕಾರಣ ।
ಮಾನವರ ಸುರಧೇನುತನ ನಿನಗಿಂದು ಸೇರಿತಲಾ ।
ಹೀನತೆಯ ಪರಿಹರಿಸಿ ಭಾಗ್ಯಾಂ ।
ಭೋನಿಧಿಯ ಕರುಣಿಸುವ ನಿನ್ನ ಮ ।
ಹಾನುಭಾವದ ಬಲುಮೆಗೆಣೆಗಾಣೆನು ಮಹಾಪ್ರಭುವೇ ॥ ೮ ॥
ಭಾಪು ದಿವಿಜರ ದೇವರಾಯನೆ ।
ಭಾಪು ದಿವಿಜರಭೀಷ್ಟದಾಯನೆ ।
ಭಾಪು ಹರಿನೀಲೋತ್ಪಲ ಶ್ಯಾಮಲನೆ ಕೋಮಲನೆ ।
ಭಾಪು ಹಯವದನಾಖಿಲೇಶನೆ ॥
ಭಾಪು ಸುಜನರ ಪಾಪನಾಶನೆ ।
ಭಾಪು ಕೃಷ್ಣ ರಮಾರಮಣ ತ್ರೈಲೋಕ ಪಾಲಕನೆ ॥ ೯ ॥

. . . . . . . . . . .

ಶ್ರೀಃ

# ಶ್ರೀ ಪರಶುರಾಮ ದೇವರು ಮತ್ತು ಕಾಮಭೋಜರಾಜ

ಶ್ರೀ ಪರಶುರಾಮ ದೇವರು: ಶ್ರೀ ಪರಮಾತ್ಮನ ದಶಾವತಾರಗಳಲ್ಲಿ ಶ್ರೀ ಪರಶುರಾಮದೇವರಾಗಿ ಅವತಾರ ಮಾಡಿ ದುಷ್ಟನಿಗ್ರಹ ಶಿಷ್ಟ ಅನುಗ್ರಹ ಮಾಡಿರುವದೂ ಒಂದು. ಪರಬ್ರಹ್ಮ ಶ್ರೀ ನಾರಾಯಣನಿಗೂ ಪರಮಾತ್ಮನ ಸಾಕ್ಷಾದವತಾರಗಳಿಗೂ ಯಾವ ಭೇದವೂ ಇಲ್ಲವೆಂದು ವೇದವಾದಿಗಳೂ ವೇದ ಪ್ರತಿಪಾದ್ಯರೂ ಜಗದ್ಗುರುಗಳೂ ಆದ ಶ್ರೀಮದಾನಂದತೀರ್ಥ ಭಗವತ್ಪಾದ ಆಚಾರ್ಯರು ತಮ್ಮ ಸಿದ್ಧಾಂತದಲ್ಲಿ ಶ್ರೀತತ್ವವಾದ ರೀತ್ಯಾ ಪ್ರತಿಪಾದಿಸಿ ಮಹದುಪಕಾರವನ್ನು ಸಜ್ಜನರಿಗೆ ಮಾಡಿದ್ದಾರೆ. ಇಂಥ ಮಹಾಪ್ರಭುವಾದ ಶ್ರೀ ಪರಶುರಾಮ ದೇವರು ಇಪ್ಪತ್ತೊಂದನೆಯ ತ್ರೇತಾಯುಗದಲ್ಲಿ ಭೂ ಭಾರಕರಾದ ಕ್ಷತ್ರಿಯರನ್ನು ಸಂಹರಿಸಲು ಇಪ್ಪತ್ತೊಂದು ಬಾರಿ ಭೂಮಂಡಲ ವನ್ನು ಸಂಚರಿಸಿ ದುಷ್ಟನಿಗ್ರಹವನ್ನು ಮಾಡಿದ ಕಥೆ ಅನೇಕ ಪುರಾಣಗಳಲ್ಲಿ ಉಕ್ತವಾಗಿದೆ.

ಕೈಲಾಸನಾಥ ಶಿವನಲ್ಲಿ ಶಿಷ್ಯತ್ವವನ್ನು ಹೊಂದಿ ಸಕಲ ಅಸ್ತ್ರಶಸ್ತ್ರಗಳನ್ನು ಅಭ್ಯಸಿಸಿದ್ದನು. ಶ್ರೀಪರಶುಧರನೆಂದೂ ಪುರಾಣಗಳಲ್ಲಿ ಉಕ್ತವಾಗಿದೆ. ಇದು ಸುಳ್ಳಲ್ಲ. ಆದರೆ ಲೋಕದರ್ಶನಕ್ಕಾಗಿ ಅಥವಾ ಲೋಕಸಂಗ್ರಹಕ್ಕಾಗಿ ತಾನು ಶಿಷ್ಯನಂತೆ ನಟಿಸುತ್ತಾ ಶಂಕರನಿಗೆ ಗುರುವಿನ ಪಟ್ಟವನ್ನೂ ಕಟ್ಟಿದನೆಂದು ಪ್ರಮೇಯಜ್ಞರು ಪ್ರಮಾಣ ಪೂರ್ವಕವಾಗಿ ತಿಳಿಸಿದ್ದಾರೆ. ಶ್ರೀ ರಾಮದೇವರು ವಿಶ್ವಾಮಿತ್ರರಲ್ಲೂ ಇದೇ ರೀತಿ ಶಿಷ್ಯತ್ವವನ್ನು ನಿರ್ವಹಿಸಿದರು. ಇದು ಲೀಲೆ ಯಲ್ಲದೆ ಮತ್ತೇನು!

'ನಗುರುಃ ನಚ ಧರ್ಮೋSಸ್ತಿ ರಾಮದೇವಸ್ಯಕುತ್ರಚಿತ್। ತಥಾಪಿ ಲೋಕ ಶಿಕ್ಷಾರ್ಥಂ ಗುರುಭಕ್ತಿಮದರ್ಶಯತ್।' ಎನ್ನುವ ಪದ್ಮ ಪುರಾಣ ವಾಕ್ಯವೂ 'ಅವತಾರೇಷು ಯತ್ಕಿಂಚಿತ್ ದರ್ಶಯೇನ್ನರವದ್ಧರಿಃ । 'ಎಂಬ ಆಚಾರ್ಯರ

ವಾಕ್ಯವೂ 'ನಾನವಾಪ್ತಮವಾಪ್ತವ್ಯಂ ವರ್ತ ಏವಚ ಕರ್ಮಣಿ' ಎಂಬ ಗೀತಾ ವಾಕ್ಯವೂ ಈ ವಿಚಾರವನ್ನು ಸ್ಪಷ್ಟೀಕರಿಸಿದೆ. ಜಗತ್ಸ್ವಾಮಿ ಶ್ರೀಕೃಷ್ಣ ಸಾಂದೀಪ ನಾಚಾರ್ಯರಲ್ಲಿ ಶಿಷ್ಯತ್ವವನ್ನು ವಹಿಸಿದಂತೆ, ಶ್ರೀ ಕೃಷ್ಣನು ಸಂತಾನಾರ್ಥಿಯಾಗಿ ಶಿವನನ್ನು ಕುರಿತು ತಪಗೈದಂತೆ ಪರಮಾತ್ಮನು ತನ್ನ ಅವತಾರಗಳಲ್ಲಿ ಸುಜ್ಞಜನರ ಆನಂದಕ್ಕಾಗಿಯೂ ಅಜ್ಞಜನ ಮೋಹನಾರ್ಥವಾಗಿಯೂ ಅನೇಕ ಲೀಲೆಗಳನ್ನು ತೋರುತ್ತಿರುವನು. ಈ ಮರ್ಮವನ್ನರಿಯದ ಜನರು ಪುರಾಣಾದಿಗಳಲ್ಲಿ ವರ್ಣಿತಗಳಾದ ಜಗದೀಶನ ಲೀಲೆಗೆ ಅಪಾರ್ಥ ಕಟ್ಟಿಕೊಂಡು ಅನರ್ಥ ಭಾಜನ ರಾಗುವದನ್ನು ತಪ್ಪಿಸುವವರಾರು? ಸಾತ್ವಿಕರು ಸಾತ್ವಿಕಾರ್ಥವನ್ನು ಅರಿತು ಉದ್ಧಾರವಾಗಿಯೇ ಆಗುತ್ತಾರೆ.

ಪರಶುರಾಮದೇವರು ತನ್ನ ಶಿಷ್ಯನಂತೆ ನಟಿಸುವಾಗ ತಾನು ಗುರುವಿನಂತೆ ನಟಿಸಲೇ ಬೇಕಾಗಿ ಬಂದು ಈ ಭಾರ ಹೊರಬೇಕೇ ತಾನು! ಶ್ರೇಷ್ಠಾಪರಾಧ ವಾಗುವುದಿಲ್ಲವೆ! ಸಜ್ಜನರೂ ತನ್ನನ್ನು ಪರಶುರಾಮನ ನಿಜಗುರು ಶಿವನೆಂದೇ ತಿಳಿದರೆ ಗತಿಯೇನೆನ್ನುತ್ತಾ, ಶಿವನು ದೇವದೇವೋತ್ತಮನೂ ಅಖಿಳಾಂಡಕೋಟಿ ಬ್ರಹ್ಮಾಂಡ ನಾಯಕನೂ ಆದ ಶ್ರೀ ಪರಶುರಾಮ ದೇವರಲ್ಲಿ ವಿಜ್ಞಾಪಿಸಿದಾಗ ಇನ್ನೂ ಕೆಲವು ಸಮಯ ಶಿವನು ತನ್ನನ್ನು ಪೂಜಿಸಲಾಗದೆಂದೂ, ತನ್ನ ಹೆಸರಿನ ಕ್ಷೇತ್ರವನ್ನು ನಿರ್ಮಿಸಿ ಅಲ್ಲಿ ತಾನು ಸನ್ನಿಹಿತನಾದಾಗ ತನ್ನ ಪೂರ್ವಭಾಗದಲ್ಲಿ ಶೇಷದೇವನ ಆವೇಶ ಉಳ್ಳವನಾಗಿ ಶ್ರೀ ಚಂದ್ರಮೌಳೀಶ್ವರನೆಂಬುದಾಗಿ ನಿಲ್ಲ ಬೇಕೆಂದೂ ಚಂದ್ರಮೌಳೀಶ್ವರನಾದ ಶಿವನ ದರ್ಶನ ಮಾಡದೆ ತನ್ನ ( ಶ್ರೀ ಶ್ರೀಮದನಂತಾಸನ ರೂಪಿ ಪರಶುರಾಮನ ) ದರ್ಶನ ಮಾಡಿದರೆ ಸಫಲವಾಗ ದೆಂದೂ ಶಿವನಿಗೆ ವರವಿತ್ತು, ಕೊಡಲಿರಾಮ ನಡೆದ ತಂದೆಯ ಬಳಿಗೆ.

ಆಮೇಲೆ ಕಾರಣಾಂತರದಿಂದ ಆ ಜಾಮದಗ್ನಿಯು ದುಷ್ಟಕ್ಷತ್ರಿಯರೆಂಬ ಹತ್ರಿಯ ರಾಶಿಯನ್ನು ಸುಟ್ಟನು. ಭೂಮಂಡಲ ಸೀಮಾರಹಿತ ಪರಾಕ್ರಮಿ ಭೃಗುರಾಮನದಾಯ್ತಂತೆ. ದುಷ್ಟಕ್ಷತ್ರ ನಿಗ್ರಹ ಪಾಪಕರವಲ್ಲವಾದರೂ ತನಗೆ ಯಾವ ಪಾಪಪುಣ್ಯಗಳೇ ಮೊದಲಾದ ಯಾವ ವಿಧದ ಅಂಟುವಿಕೆಯೂ ಇಲ್ಲ ವಾದರೂ ಕಂಡಕಂಡಲ್ಲಿ ದುರುಳರ ತಂಡತಂಡಗಳ ಶಿರ ಚೆಂಡಾಡಿದ ಗಂಡು ಗೊಡಲಿ ಹಿಡಿದ ರಾಮ ಪುಂಡರ ಹೆಸರೇ ಇಲ್ಲದಂತೆ ಮಾಡಿದ್ದರೂ ನರಹತಾ

ಪಾಪ ಪರಿಹಾರಕ್ಕಾಗಿ ಭೂದಾನದ ನಾಟಕ ಮಾಡಿ ಲೋಕಾನುಕರಣ ಪ್ರವೀಣ ನಾದ ಸ್ವಾಮಿ ಸಮಸ್ತ ಭೂಮಿಯನು ಭೂಸುರರಿಗೆ ದಾನ ಮಾಡಿದನು,

ದಾನಗೈದ ಭೂಮಿಯಲ್ಲೇ ತಾನು ಕೆಲಕಾಲ ನಿಂತಿರಲು ದಾನಕೊಟ್ಟ ಸ್ಥಳದಲ್ಲೇ ಏನುಕಾರಣ ಇನ್ನೂ ಕಾಣಿಸಿಕೊಂಡಿದ್ದಾನೆ ಈ ಚಂಡಪರಾಕ್ರಮಿ ದತ್ತಾಪಹಾರದೋಷ ಇವನಿಗುಂಟಲಾರದೆ ಎಂಬ ಮಾತು ಕರ್ಣಾಕರ್ಣಿಕೆಯಾಗಿ ಕಿವಿಮುಟ್ಟಿದಾಗ ಎಚ್ಚೆತ್ತವನಂತೆ ತಾನು ನಿಲ್ಲುವದಕ್ಕೆ ತಾಣವೆಲ್ಲೆಂದು ಚಿಂತಿಸಿದವನಂತೆ ನಟಿಸಿ ಸಾಗರನನ್ನು ಕರೆದು ತನಗೆ ಸ್ವಲ್ಪ ಜಾಗವನ್ನು ಕೊಡುವಂತೆ ಕೂಗಿ ಹೇಳಿದಾಗ ಶರಧಿ ನಗುತ್ತ ಪರಶುಧರ ಬಾಣವನ್ನು ಎಸೆದಷ್ಟು ಪ್ರದೇಶದ ಜಲರಾಶಿ ಹಿಂದೆ ಸರಿದು ಸ್ಥಳ ಕಲ್ಪಿತವಾಗುವದು ಎಂದೊಡನೆ ಈ ರಾಮ ಸಹ್ಯಾದ್ರಿ ಗಿರಿಯ ಮೇಲೆ ನಿಂತು ಬಾಣವನ್ನು ಎಸೆಯಲು ಗೋಕರ್ಣದಿಂದ ಕನ್ಯಾಕುಮಾರಿಯ ತನಕ ಸಹ್ಯಾದ್ರಿ ಬುಡದಿಂದ ಇಪ್ಪತ್ತೈದು ಮೈಲಿಗಳ ದೂರ ದಷ್ಟಿರಬಹುದು, ಸಾಗರನು ಹಿಂದೆ ಸರಿದು ನಿಂತನಂತೆ. * ಅಮಿತ ಪರಾಕ್ರಮಿ ಪರಶುರಾಮ ಸಮುದ್ರನ ಮೇಲಿನ ಕರುಣೆಯಿಂದ ಅವಶ್ಯವಿದ್ದಷ್ಟು ದೂರ ಮಾತ್ರ ಬಾಣವನ್ನೆಸೆದುದರಿಂದ ಸಾಗರದಂಚಿನ ಸ್ವಲ್ಪ ಭಾಗ ತಲಮಾತ್ರ ( ಇಲ್ಲವಾದರೆ ಸಾಗರವೆಲ್ಲ ಬತ್ತಬೇಕಾಗಿತ್ತು ) ಜಲವಿಲ್ಲದ ಸ್ಥಳವಾಯಿತ್ತು. ಹಿಂದೆ ಇಂದ್ರನು ಪರ್ವತಗಳಿಗೆ ಅಹಂಕಾರ ಬಂದಾಗ ಅವುಗಳ ರೆಕ್ಕೆಗಳನ್ನು ಕತ್ತರಿಸಿದ್ದನಷ್ಟೆ! (ಈ ಕಥೆ ವಾಲ್ಮೀಕಿ ರಾಮಾಯಣ ಸುಂದರ ಕಾಂಡದ ಆರಂಭ ದಲ್ಲೂ ಇದೆ. ಮೈನಾಕ ಹನುಮರ ಸಮಾಗಮ ಸಂದರ್ಭ ) ಹಾಗೆ ಕತ್ತರಿಸಿ ದಾಗ ಬಿದ್ದ ರೆಕ್ಕೆಗಳು ಈ ಭಾಗದ ತಲದಲ್ಲೇ ಬಿದ್ದಿದ್ದವು. ನೀರು ಹಿಂದೆ ಸರಿದ ಪ್ರದೇಶದ ಭೂಭಾಗದ ಬೆಟ್ಟಗುಡ್ಡಗಳಾಗಿ ಇವೇ ಕಾಣಿಸಿಕೊಂಡವು.

ಕನ್ಯಾಕುಮಾರಿಯಿಂದ ಗೋಕರ್ಣದ ತನಕ ಈ ಪ್ರದೇಶವು ಪರಶುರಾಮ ಸೃಷ್ಟಿ ಎಂದು ಪ್ರಸಿದ್ಧವಾಯಿತ್ತು. ಪರಶುರಾಮಸೃಷ್ಟಿಯಲ್ಲಿ ಮುಂದೆ ಸಪ್ತಕ್ಷೇತ್ರ ಗಳು ಪ್ರಸಿದ್ಧವಾದುವು. ಇವುಗಳಲ್ಲಿ ರಜತಪೀಠ ಅಥವಾ ಈಗ ಉಡುಪಿಯೆಂದು ಕರೆಯಿಸಿಕೊಳ್ಳುವ ಉಡುಪಿಕ್ಷೇತ್ರವು ಮೊದಲನೆಯುದು ಮತ್ತು ಶ್ರೇಷ್ಠವು.

---

* ಶ್ರೀ ಪರಶುರಾಮದೇವರು ಬಾಣಪ್ರಯೋಗ ಮಾಡಿದಾಗ ಸಮುದ್ರಸ್ಥರಾದ ಅನೇಕ ದೈತ್ಯರೂ ಸಂಹೃತರಾದರು ಎಂಬುದಾದಿ ರಜತಪೀಠ ಪುರ ಮಾಹಾತ್ಮ್ಯದಲ್ಲಿವೆ.

ಸಮುದ್ರ ಮಟ್ಟದಿಂದಲೂ ಭೂಮಿಯು ತಗ್ಗಿನಲ್ಲೇ ಇರುವದು ಸಮುದ್ರ ಒಳಗೆ ಕೆಳಗೆ ನುಗ್ಗಿಬಂದು ಭೂಮಿಯನ್ನು ಆಕ್ರಮಿಸದೇ ಇರುವುದೂ ವಿಚಿತ್ರವೇ ಸರಿ! ಪಶ್ಚಿಮ ಸಮುದ್ರತೀರ ಪ್ರದೇಶದಲ್ಲಿರುವ ರಜತ ಪೀಠ ಅಥವಾ ಉಡುಪಿ ಕ್ಷೇತ್ರ ಜಗತ್ತಿನ ಪ್ರಕೃತಿರಮಣೀಯ ಪ್ರದೇಶಗಳಲ್ಲಿ ಒಂದೆಂಬ ವಿಚಾರದಲ್ಲಿ ಪ್ರಕೃತಿಸೌಂದರ್ಯವನ್ನು ನೋಡಿ ನಲಿಯುವ ಪ್ರಪಂಚ ಪರ್ಯಟನಾಸಕ್ತರಿಗೂ ಯಾರಿಗೂ ಅನುಮಾನ ಉಳಿಯಲಾರದು. ಸಾಗರಶಾಯಿ ಶ್ರೀ ನಾರಾಯಣ ಅವತಾರಿ ಶ್ರೀಪರಶುರಾಮದೇವರು ತನ್ನ ಆಣತಿಯಂತೆ ಚತುರ್ಮುಖ ಬ್ರಹ್ಮನು ಸೃಷ್ಟಿಸಿದ ಈ ಪ್ರಪಂಚದಲ್ಲಿ ತನ್ನ ಈ ಅಂತಃಸೃಷ್ಟಿಯನ್ನೂ ಮಾಡಿ ಕಲಿಯುಗ ದಲ್ಲಿ ಹತ್ತುಸಾವಿರ ವರ್ಷಗಳ ಮೇಲೆ ಭೂಲೋಕದಲ್ಲಿ ಇತರ ಸ್ಥಳಗಳಲ್ಲಿ ಶ್ರೀ ಹರಿಸನ್ನಿಧಾನವು (ತನ್ನ ಸನ್ನಿಧಾನವು) ಮರೆಯಾದರೂ ಇಲ್ಲಿ (ಪರಶುರಾಮ ಸೃಷ್ಟಿಯಲ್ಲಿ) ಮರೆಯಾಗದಂತೆ ಭಕ್ತರಿಗೆ ವರವನ್ನು ಕರುಣಿಸಿದ್ದಾನೆ.

ತಾನು ಪ್ರತ್ಯೇಕವಾಗಿ ಸೃಷ್ಟಿಸಿದ ಈ ಪ್ರದೇಶದಲ್ಲಿ ಜನರನ್ನು ಸೃಷ್ಟಿಸಿ ರಾಮಭೋಜನೆಂಬ ರಾಜನನ್ನೂ ಸೃಷ್ಟಿಸಿದನು. ಬ್ರಾಹ್ಮಣಾದಿ ವರ್ಣಗಳವರೂ ಸೃಷ್ಟರಾದರು. ರಾಮಭೋಜ ದೇವ ಪರಶುಧರನಾಜ್ಞೆಯಂತೆ ರಾಜನಾದ- ದೇವರ ಸಂಕಲ್ಪದಂತೆ ಅನೇಕ ಹರಿ ಹರ ಹರಿದುರ್ಗಾ ಹರದುರ್ಗಾ ಕ್ಷೇತ್ರಗಳೂ ನಿರ್ಮಿತವಾದುವು. §ನಾನಾ ಪುಣ್ಯನದಿಗಳಿಂದಲೂ ಪರ್ವತಗಳಿಂದಲೂ ಶೋಭಿತವೂ ಕ್ಷಾಮಾದಿ ಪೀಡಾ ರಹಿತವೂ ಆದ ಪ್ರದೇಶವಿದು.

---

§ 'ನಾನಾ ಪುಣ್ಯನದೀಭಿಶ್ಚ ನಾನಾದ್ರಿ ವನ ಶೋಭಿತಾಂ। ಕ್ಷಾಮಾದಿ ಪೀಡಾ ರಹಿತಾಂ ಕರಿಷ್ಯೇಸೃಷ್ಟಿಮುತ್ತಮಾಂ ।' ಎಂಬುದಾಗಿ ಮೂಲವು. ಇದು ಗಂಜಿರಾಜ್ಯವೆಂದು ಕೆಲವರು ಹಾಸ್ಯ ಮಾಡುತ್ತಿದ್ದರು. ಆದರೆ ಕ್ಷಾಮ ಡಾಮರ ರಹಿತವೂ ಸಾಮೂಹಿಕ ರಕ್ತಕ್ರಾಂತಿ ಇಲ್ಲದೆಯೂ ಜನ ಕ್ಷೇಮಕರ ವಾಗಿಯೂ ಸಾವಿರಾರು ವರ್ಷಗಳಿಂದ ಶ್ರೀಪರಶುರಾಮನ ಸೃಷ್ಟಿಯ ಪ್ರದೇಶವು ತನ್ನದೇ ಆದ ಇತಿಹಾಸವನ್ನು ಸ್ಥಾಪಿಸಿದೆಯಷ್ಟೆ! ಇಲ್ಲಿ ನಡೆಯುವಂತೆ ಸಾಮೂಹಿಕ ಅನ್ನ ಸಂತರ್ಪಣೆಯೂ ಬೇರೆಲ್ಲಿ ನಡೆಯುತ್ತಿದೆ? ಉಡುಪಿ ಧರ್ಮಸ್ಥಳ ಸುಬ್ರಹ್ಮಣ್ಯ ಮೊದಲಾದ ಕ್ಷೇತ್ರಗಳಲ್ಲಿಯೂ ನಿತ್ಯವೂ ಸಾವಿರಾರು ಜನ ಸ್ಥಳ ಪರಸ್ಥಳದವರಿಗೆ ಅನ್ನದಾನ ನಡೆಯುತ್ತಿದೆ.

ಭಕ್ತೋತ್ತಮನಾದ ರಾಮಭೋಜರಾಜನು ಒಂದು ಮಹಾಯಜ್ಞವನ್ನು ಮಾಡಿ ಅಗ್ನ್ಯಂತರ್ಯಾಮಿಯೂ ತನ್ನ ಸ್ವಾಮಿಯೂ ಸರ್ವಸ್ವಾಮಿಯೂ ಮುಕ್ತಾಮುಕ್ತನಿಯಾಮಕನೂ ಆದ ಪರಶುರಾಮ ದೇವರನ್ನು ಯಜ್ಞಮುಖ ದಿಂದಲೂ ಅತ್ಯಂತ ಸುಪ್ರಸನ್ನನಾಗಿ ಮಾಡಿಕೊಳ್ಳಲು ನಿಶ್ಚೈಸಿ ಅನೇಕಾನೇಕ ದಿಕ್ ದೇಶಗಳಿಂದ ಶ್ರೋತ್ರಿಯರಾದ ಹವ್ಯಕವ್ಯ ನಿಪುಣರಾದ ಬ್ರಾಹ್ಮಣೋ ತ್ತಮರನ್ನು ಕರೆಸಿದನು. ತನ್ನ ರಾಜಧಾನಿಯಾದ ಉದಯಪುರ ( ಈಗ ಉದ್ಯಾವರ ) ಎಂದು ಕರೆಸಿಕೊಳ್ಳುವ ಪ್ರದೇಶದಿಂದ ಮೂರು ಮೈಲಿಗಳ ಉತ್ತರದಲ್ಲಿ ವಿಶಾಲವಾದ ಸ್ಥಳವನ್ನಾರಿಸಿಕೊಂಡನು.



ಉದ್ಯಾವರ ಶ್ರೀ ಗಣಪತಿ

ಉದ್ಯಾವರದಲ್ಲ ಪ್ರಸಿದ್ಧವಾದ ಶ್ರೀ ಗಣಪತಿ ದೇವಾಲಯವೂ ಬಂಡೆಯ ಮೇಲೆ ಚಂಬುಕಲ್ಲು ಎಂಬ ಪ್ರದೇಶವಲ್ಲಿ ಈಶ್ವರ ದೇವಾಲಯವೂ ಪುರಾತನಗಳಾಗಿ ರಾರಾಜಿಸುತ್ತಿವೆ. ಮತ್ತು ಕಾರಣೀಕ ಸ್ಥಳಗಳಾಗಿವೆ,

ರಾಮಭೋಜರಾಜನು ಯಜ್ಞಕ್ಕಾಗಿ ಆಯ್ದುಕೊಂಡ ಸ್ಥಳದಲ್ಲಿ ಭೂಶುದ್ಧ್ಯರ್ಥವಾಗಿ ಸುವರ್ಣಲಾಂಗಲದಿಂದ ಕರ್ಷಣ ಮಾಡತೊಡಗಿದಾಗ ಮಹಾಸರ್ಪವೊಂದು ಹುತ್ತದೊಳಗೆ ಅಡಗಿದ್ದುದು ನೇಗಿಲಿನ ತುದಿ ತಗಲಿ ಅಲ್ಲೇ ಮೃತಪಟ್ಟಿತು. ಸರ್ಪಹತ್ಯಾ ದೋಷ ಪ್ರಾಪ್ತವಾಯ್ತೆಂದು ರಾಜನು ಅತ್ಯಂತ ಖಿನ್ನನಾದಾಗ ರೇಣುಕಾಸುದನನು ವೈರಿದೋರಿ ಹತವಾದುದು ಕೇವಲ ಸರ್ಪವಲ್ಲ. ಭೂಮಿಯೊಳಡಗಿದ್ದ ಮಹಾದೈತ್ಯನೊಬ್ಬನು ಮಣ್ಣು ಮುಕ್ಕಿದ್ದಾನೆ. ಆದುದರಿಂದ ಚಿಂತಿಸದಿರು. ಸರ್ಪರೂಪ ದೈತ್ಯನ ಸಂಹಾರದಿಂದ ಪುಣ್ಯವು ತಾನೇ ತಾನಾಗಿ ಪ್ರಾಪ್ತವಾಗಿರುವುದು ನಿನಗೆ, ಆದರೂ ಸರ್ಪಹತ್ಯೆಯು ದೋಷಪ್ರದವಲ್ಲ ಪುಣ್ಯಪ್ರದವೆಂದು ಜನ ಭಾವಿಸದಂತೆ ಸರ್ಪಹತ್ಯಾ ದೋಷ ಪ್ರಾಯಶ್ಚಿತ್ತಕ್ಕಾಗಿ ಎಂಬುತೆ ಭೂಸುರಾನೇಕರನ್ನು ಕರೆಸಿ ಅವರನ್ನು ತಕ್ಕಡಿಯಲ್ಲಿ ಕೂರಿಸಿ ಅವರ ತೂಕದಷ್ಟೇ ಸುವರ್ಣದಾನಗೈದು ಮಹತ್ಪುಣ್ಯ ಯಶೋಭಾಜನನಾಗೆಂದೆನ್ನಲು ರಾಜನು ಅಂತೆಯೇ ಎಸಗಿದನು. ಆ ಪ್ರಕಾರ ಸುವರ್ಣ ತುಲಾಭಾರ ನಡೆದ ಸ್ಥಳವೇ ತುಲಾದೇಶವೆಂದಾಯ್ತು. ತುಲಾ ಸಂಬಂಧದಿಂದ ಈ ಪ್ರದೇಶವು ತೌಲವದೇಶ (ಲಳಯೋರಭೇದಃ ಎಂಬ ಸೂತ್ರದಂತೆ ತೌಳವ ದೇಶ) ವೆಂದೂ ಇಲ್ಲಿನ ಜನರ ಭಾಷೆ ತುಳುವೆಂದೂ ಜನರು ತುಳುಜನರೆಂದೂ ಖ್ಯಾತರಾದರು.

ರಾಜ್ಞೋ ನ ದುಷ್ಟಹತ್ಯಾ ಸ್ಯಾತ್ಕಿಂತು ಪುಣ್ಯ ಮಹತ್ತರಂ ।<br>
ತಥಾಪಿ ಲೋಕಶಿಕ್ಷಾರ್ಥಂ ಪುಣ್ಯವೃದ್ಧ್ಯರ್ಥಮೇವಚ ।<br>
ತುಲಾಪುರುಷದಾನಾದಿ ತುಲಾಭಾರಾಂಸ್ತಥಾಪರಾನ್ ।<br>
ವಾಜಿಮೇಧಂ ಮಹಾಯಜ್ಞಂ ಕುರು ಕೀರ್ತಿಮವಾಪ್ಸ್ಯಸಿ ॥

ರಜತಪೀಠ ಪುರಮಾಹಾತ್ಮ್ಯಮ್ ೨ ॥ ೨೩–೨೪ ॥

ರಾಜರಿಗೆ ದುಷ್ಟಹತ್ಯೆಯಿಂದ ಸರ್ವಥಾ ಪಾಪವು ಬರುವದಿಲ್ಲ, ಮಾತ್ರವಲ್ಲ ಮಹತ್ತರ ಪುಣ್ಯವೇ ಬರುವುದು ಆದರೂ ಲೋಕ ಶಿಕ್ಷಾರ್ಥವಾಗಿಯೂ ಪುಣ್ಯವೃದ್ಧಿಗಾಗಿಯೂ ತುಲಾ ಪುರುಷದಾನಾದಿಗಳನ್ನು ತುಲಾಭಾರ ಮೊದಲಾದವುಗಳನ್ನೂ ಮಹಾಯಜ್ಞವಾದ ಅಶ್ವಮೇಧವನ್ನೂ ಮಾಡಿ ಕೀರ್ತಿಯನ್ನು ಹೊಂದುವಿ' ಎಂಬುದಾಗಿ ಶ್ರೀ ಪರಶುರಾಮದೇವರ ಆಜ್ಞಾನುಸಾರ ರಾಜನು ನಡೆದು ಕೃತಾರ್ಥನಾದನು. ತುಳುನಾಡಿನ ಉದಯವೂ ಆಯಿತು.

ಪರಶುರಾಮ ಸೃಷ್ಟಿಯೇ ವಿಚಿತ್ರವಾಗಿಯೂ ನಂಬಲು ಕಷ್ಟವಾಗಿಯೂ ಇಂದಿನ ವಿಮರ್ಶಕರನೇಕರಿಗೂ ತೋರಬಹುದು. ಅನೇಕಾನೇಕ ಬ್ರಾಹ್ಮಣರಿಗೆ ಅವರವರ ತೂಕದಷ್ಟು ಚಿನ್ನವನ್ನು ದಾನಮಾಡಿದ್ದು ಬರಿ ಸುಳ್ಳೇನೋ ಎಂಬಂತೆ ದರಿದ್ರರ ಮನಸ್ಸಿಗೆ ತೋರಬಹುದು, ಇಂದು ಮುಂದರಿದ ರಾಷ್ಟ್ರಗಳೆನಿಸಿದ ಅಮೇರಿಕಾ ರಷ್ಯಗಳ ವಿಜ್ಞಾನಿಗಳು ಚಂದ್ರಲೋಕದಲ್ಲಿ ರ್ಯಾಕೆಟ್ ಕಾರ್‌ಗಳನ್ನು ಇಳಿಸಿ ತಾವೂ ಅಲ್ಲಿ ಇಳಿದು ಅಲ್ಲಿನ ಮಣ್ಣನ್ನು ಭೂಮಿಗೆ ತಂದುದನ್ನೂ ಅಲ್ಲಿ ಅವರಿಳಿದಾಗಲೂ ಅವರೊಡನೆ ಭೂಮಿಯಲ್ಲಿ ಇದ್ದವರು ಟೆಲಿವಿಷನ್ ಸಂಪರ್ಕ ಬೆಳಿಸಿದ್ದ ವಿಚಾರವನ್ನೂ ವರ್ತಮಾನ ಪತ್ರಿಕೆಗಳಲ್ಲಿ ಓದಿದ ಅಸ್ಮದಾದಿಗಳಿಗೆ ನಂಬಲಿಕ್ಕೆ ಕಷ್ಟವೆನಿಸಿದಾಗ ಗಾಂಪರ ಪಾಡೇನು.?

ದೇವರನ್ನೇ ನಂಬದವರನ್ನು ಈ ವಿಚಾರಗಳನ್ನೆಲ್ಲಾ ನಂಬಿರೆಂದು ಬಲಾತ್ಕರಿಸಲು ಸಾಧ್ಯವೆ? ಬಲಾತ್ಕರಿಸಿ ಫಲವಾದರೂ ಏನು?

ರಾಮಭೋಜರಾಜ ರಾಜನು ಚಿನ್ನದ ನೇಗಿಲಿನಿಂದ ಉತ್ತಸ್ಥಳ ಕೃತಯುಗದಲ್ಲಿ ವರುಣ ತೀರ್ಥವೆಂದೂ, ತ್ರೇತಾಯುಗ, ದ್ವಾಪರಯುಗಗಳಲ್ಲಿ ಕ್ರಮವಾಗಿ ಅನಂತ ತೀರ್ಥ ಚಂದ್ರಪುಷ್ಕರಿಣಿ ತೀರ್ಥಗಳೆಂದೂ, ಕಲಿಯುಗದಲ್ಲಿ ಶ್ರೀ ಮಧ್ವರ ಅವತಾರದ ನಂತರ ಶ್ರೀ ಮಧ್ವಸರೋವರವೆಂದೂ ಕರೆಸಿಕೊಂಡಿರುವ ಪರಮ ಪವಿತ್ರ ತೀರ್ಥದ ಉತ್ತರ ಭಾಗವಾಗಿತ್ತು. ಅಂದರೆ ಈಗ ಉಡುಪಿ ಶ್ರೀ ಕೃಷ್ಣ ಮಠದ ಗೋ ಶಾಲೆಯ ಮುಂಬಾಗದಲ್ಲಿರುವ ವಸಂತ ಮಹಲಿನ ಅಂಚಿನಲ್ಲಿರುವ ಬಡಗು ಮಾಳಿಗೆಯ ಎದುರಿನಲ್ಲಿರುವ ಭೋಜನ ಶಾಲೆಯ ಬಲಬದಿಯಲ್ಲಿರುವ ಶ್ರೀ ಸುಬ್ರಹ್ಮಣ್ಯ ದೇವರ ಗುಡಿಯಿರುವ ಸ್ಥಳವೇ ಇರಬೇಕು. ಇಲ್ಲಿ ತಕ್ಷಕನ ಪಾತಾಲ ಗುಹೆಯೂ ಇದ್ದಿತ್ತೆಂದು ಪ್ರತೀತಿ. ಇಲ್ಲೇ ಸರ್ಪರೂಪಿ ದೈತ್ಯನೂ ಹುತ್ತದೊಳಗಿದ್ದ ಅವನ ಕಥೆಯೂ ಮುಗಿಯಿತು. ಯಜ್ಞಾರಂಭದಲ್ಲೇ ಲೋಕಕಲ್ಯಾಣವಾದಂತಾಯ್ತು, ತಕ್ಷಕನ ಗುಹೆಯಿದ್ದ ಈ ಸ್ಥಳದಲ್ಲೇ ಮುಂದೆ ಶ್ರೀಮದ್ಭಾವಿಸಮೀರ ಶ್ರೀ ವಾದಿರಾಜರು ಸುಬ್ರಹ್ಮಣ್ಯ ದೇವರ ಪ್ರತೀಷ್ಠೆಯನ್ನೂ ಮಾಡಿದರು. ಯಜ್ಞ ನಡೆದ ಸ್ಥಳವೆಂಬ ಕಾರಣವೂ ಇರಬೇಕು.

ರಾಮಭೋಜನಿಗೆ ದೇವ ಪರಶುಹಸ್ತರು ಈ ಪ್ರಕಾರವೂ ಆಜ್ಞಾಪಿಸಿದ್ದರು ದೇವರ ಚರಣಗಳಲ್ಲಿ ನ್ಯಸ್ತಮಸ್ತಕನಾದ ರಾಜನು ಒಂದಕ್ಷರವನ್ನೂ ಬಿಡದಂತೆ ದೇವರ ಆಜ್ಞೆಯನು ಪಾಲಿಸಿದನು. ದೇವರಾಜ್ಞೆ ಹೀಗಿತ್ತು.

' ರಾಜಶೇಖರ ರಾಮಭೋಜನೇ, ತುಲಾಪುರುಷದಾನದಿಂದ ಕೃತಾರ್ಥನಾದ ನೀನು ಐದು ಮೈಲಿಗಳ ವಿಸ್ತೀರ್ಣ ಉಳ್ಳ ರಜತಪೀಠ (ಬೆಳ್ಳಿಯ ಮಣೆ) ಯನ್ನು ನಿರ್ಮಿಸು. ಆ ಪೀಠದ ಮಧ್ಯದಲ್ಲಿ ಸುವರ್ಣದ ಶೇಷಾಸನವನ್ನು ಮಾಡಿಸು. ನಿನು ಕೈಕೊಂಡ ಯಜ್ಞಾರಂಭವಾಗಿ ಅವಭೃಥದ ತನಕ ಅನಂತಾಸನನಾಗಿ ರಜತ ಪೀಠದ ಮಧ್ಯ ಸುವರ್ಣ ಅನಂತಾಸನದಲ್ಲಿ ಸಂಸ್ಥಿತನಾಗಿದ್ದು ನಿನ್ನ ಸೇವೆಯನ್ನೆಲ್ಲ ಸಾಕ್ಷಾತ್ತಾಗಿ ಸ್ವೀಕರಿಸುವೆನು' ಎಂಬುದಾಗಿ ಅನುಗ್ರಹಿಸಿದ್ದರು.

ರಾಜನು ಅದರಂತೆ ರಜತಪೀಠ ಸುವರ್ಣ ಅನಂತಾಸನ ಮೊದಲಾದುವುಗಳನ್ನು ಮಾಡಿಸಿ ದೇವರನ್ನು ಸಂಪ್ರಾರ್ಥಿಸಲು ದೇವರು ದಿವ್ಯದರ್ಶನವಿತು ಸುವರ್ಣ ಅನಂತಾಸನಸ್ಥ ದೇವರಾಗಿ ದರ್ಶನವಿತ್ತು ರಾಜನ ವಿವಿಧೋಪಚಾರಗಳನ್ನು ಸಾಕ್ಷಾತ್ತಾಗಿ ಸ್ವೀಕರಿಸಿದರು.

ಯಜ್ಞಸಾಂಗವಾಗಿ ನೆರವೇರಿತು, ತುಲಾಪುರುಷ ದಾನವನ್ನು ರಾಜನಿಂದ ಪಡೆದವರು ತೌಳವ ಬ್ರಾಹ್ಮಣರಾದರು. ಅವರ ಭಾಷೆ ತುಳು. ಅವರ ನೆಲೆ ತುಳುನಾಡೆಂದಾಯ್ತು.,

( ತುಲಾ ಸಂಬಂಧವಾಗಿ ತೌಳವರಾದರೇ? ತುರುನಾಡೇ ತುಳನಾಡೆಂದಾಯ್ತೆ? ಇನ್ನೂ ಸಂಶೋಧನೆ ಮುಂದರಿಯುತ್ತಲೇ ಇದೆ.)†

ಯಜ್ಞವು ಸಾಂಗೋಪಾಂಗವಾಗಿ ನಡೆದು ಯಜ್ಞ ಆಚರಿಸಿದ ಸ್ಥಳದಿಂದ ಮೂರು ಮೈಲಿಗಳ ದೂರದಲ್ಲಿರುವ ಸುವರ್ಣಾ ನದಿಯಲ್ಲಿ ಅವಭೃಥ ಸ್ನಾನವನ್ನಾಚರಿಸಿದರು. ದೇವರು ಅದೃಶ್ಯರಾದರು. ದೇವರು ' ರಾಜಶ್ರೇಷ್ಠನೇ

---

† ರಜತಪೀಠ ಉಡುಪಪುರ ತೌಲವ ಬ್ರಾಹ್ಮಣ ಇತ್ಯಾದಿ ಪದಗಳಿಗೆಲ್ಲಾ ಸಂಸ್ಕೃತದಲ್ಲಿರುವ ರಜತಪೀಠಪುರ ಮಾಹಾತ್ಮ್ಯವೇ ಆಧಾರವಷ್ಟೇ! ಹಾಗಾದರೆ ತುಲಾಸಂಬಂಧದಿಂದ 'ತೌಲವ' ಬ್ರಾಹ್ಮಣ ದೇಶ ಭಾಷೆ ಇತ್ಯಾದಿಗಳೂ ಉತ್ಪನ್ನವಾದವೆಂದೂ ಅಂಗೀಕರಿಸಲೇ ಬೇಕಾಗುವದು.

ನೀನು ಯಜ್ಞವನ್ನಾಚರಿಸಿದ ಈ ಪವಿತ್ರ ಸ್ಥಳವು ಮುಂದೆ ರಜತ ಪೀಠವೆಂದು ಪ್ರಸಿದ್ಧವಾಗುವದು. ನಾನು ಕೆಲಕಾಲದ ನಂತರ ಪುನಃ ಈ ಸ್ಥಳದಲ್ಲಿ ಲಿಂಗಾಕಾರನಾಗಿ ಉದ್ಭವಿಸಿ ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವೆನು. ನನ್ನ ಭಕ್ತಾಗ್ರೇಸರನಾದ ನೀನು ಧನ್ಯನು ಕೃತಾರ್ಥನು. ನಿನ್ನ ಹೆಸರು ಅಮರ ವಾಗಲಿ' ಎಂದು ಅದೃಶ್ಯರಾದರು. ರಜತಪೀಠವೂ ಸುವರ್ಣ ನಿರ್ಮಿತ ಅನಂತ ಆಸನವೂ ಪಾತಾಲತಲದಲ್ಲಿ ಅದೃಶ್ಯವಾಯಿತು.

ಇಂದಿನ ರಜತಪೀಠಪುರದಲ್ಲಿ ಪುರ ಪ್ರಮುಖರನೇಕರ ಹೆಸರಿನ ಸ್ಮಾರಕ ಗಳು ತಲೆ ಎತ್ತಿ ನಿಂತಿರುವದಾದರೂ ರಾಮಭೋಜನ ಸ್ಮಾರಕವಾಗಿ ರಥ ಬೀದಿಯ ಆವರಣದ ಒಳಗೆ ಒಂದು ದಿವ್ಯ ಭವ್ಯ ಸ್ಮಾರಕವನ್ನು ನಿರ್ಮಿಸಿ ದೈವಭಕ್ತಾಗ್ರೇಸರನೂ ರಜತಪೀಠಪುರ ನಿರ್ಮಾಪಕನೂ ಆದ ರಾಮಭೋಜನ ನೆನಪನ್ನು ಉಡುಪಿಯ ಜನರು ನಿತ್ಯವೂ ಮಾಡಿಕೊಳ್ಳುತ್ತ, ಯಾತ್ರಿಕರಿಗೂ ಆ ಪುಣ್ಯಶ್ಲೋಕರಾಯನ ವಿಚಾರವನ್ನು ಅರಿಯುವ ಕುತೂಹಲವನ್ನೂ ಕೆರಳಿಸು ವಂಥ ನೋಟದ ರಾಮಭೋಜನ ಸ್ಮಾರಕವನ್ನು ನಿರ್ಮಿಸುವದು ಉಡುಪಿಯ ನಾಗರಿಕರ ಮತ್ತು ಯಾತ್ರಿಕರ ಆದ್ಯಕರ್ತವ್ಯವೆಂದು ಈ ಲೇಖಕನ ವಿನಯ ಪೂರ್ವಕ ಸೂಚನೆ. ಭಕ್ತ ಕನಕದಾಸರ ಸ್ಮಾರಕದಷ್ಟೇ ಏನು ಒಂದು ರೀತಿ ಯಿಂದ ಅದಕ್ಕಿಂತಲೂ ಮುಖ್ಯ ಉಡುಪಿಯಲ್ಲಿ ರಾಮಭೋಜರಾಜನ ಭವ್ಯ ಸ್ಮಾರಕವು, ಶ್ರೀ ಪರಶುರಾಮರ ಪಾದಗಳಿಗೆ ಶಿರಬಾಗಿ ನಿಂತಿರುವ ರಾಜಶ್ರೇಷ್ಠ ರಾಮಭೋಜನ ಶಿಲಾಪ್ರತಿಮೆಯೋ ಸ್ಥಾಪಿತವಾದರೆ ಉತ್ತಮ.

## ಉಡುಪಿಯ ಉದಯ

ರಜತ ಪೀಠ ಸುವರ್ಣ ಅನಂತ ಆಸನಗಳೂ ಪಾತಾಲತಲದಲ್ಲಿ ಅದೃಶ್ಯ ಗಳಾಗಿ ಆ ಸ್ಥಳದಲ್ಲಿ ಗರ್ತ (ಹೊಂಡ) ನಿರ್ಮಿತವಾದ ಮೇಲೆ ಭಕ್ತ ಜನರು ಬಹುಕಾಲ ಆ ಗುಹೆಯನ್ನೇ ಪೂಜಿಸುತ್ತಾ ಇಷ್ಟಾರ್ಥಗಳನ್ನು ಪಡೆಯುತಾ ಬಂದರು.

ಈ ಗುಹೆಯಿರುವ ಸ್ಥಳದಿಂದ ಅಂದರೆ ಈಗ ಶ್ರೀಮತ್ ಅನಂತಾಸನ ದೇವರ ಗುಡಿಯಿರುವ ಸ್ಥಳದಿಂದ ದಕ್ಷಿಣಕ್ಕೆ ಸುಮಾರು ಅರ್ಧಮೈಲಿ ದೂರದಲ್ಲಿ ಅಬ್ಜಾರಣ್ಯವೆಂಬ ಅರಣ್ಯಪ್ರದೇಶ ಆರಂಭವಾಗಿ ಸ್ವಲ್ಪದೂರ ವ್ಯಾಪಿಸಿತ್ತು.

(ಆಗಿನ ಅಬ್ಬಾರಣ್ಯವೇ ಕ್ರಮೇಣ ಅಜ್ಜರಕಾಡು ಎಂದಾಯ್ತು. ಇದಕ್ಕೆ ಈಗ ವಿವೇಕನಗರವೆಂದು ಹೆಸರಿಟ್ಟಿರುವರಾದರೂ ಈ ಹೆಸರು ಇನ್ನೂ ರೂಢಿಗೆ ಬಂದಿಲ್ಲ, ಮಾತ್ರವಲ್ಲ, ಈಗ ಇಲ್ಲಿ ಅರಣ್ಯದ ಸುಳಿವೇ ಸಿಗಲಾರದು.)

ಈ ಅರಣ್ಯದಲ್ಲೊಂದು ಪವಿತ್ರತೀರ್ಥವೂ ಇದೆ. ಹಿಂದೆ ದಕ್ಷ ಶಾಪದಿಂದ ಚಂದ್ರನು ಕಳಾರಹಿತನಾಗಿ ನೊಂದು ಈ ಸ್ಥಳದಲ್ಲಿ ಒಂದು ಅಂಶದಿಂದ ನಿಂದು ಹರನನ್ನು ಕುರಿತು ತಪವನ್ನಾಚರಿಸಲು ಇಂದುವಿಗೆ ವರವನ್ನು ಕರುಣಿಸುವದಕ್ಕಾಗಿಯೂ ಅನಂತ ಆಸನ ನಾಮನಾದ ಶ್ರೀ ಪರಶುರಾಮ ದೇವರನ್ನು ಅರ್ಚಿಸಿ ಮೆಚ್ಚಿಸಲಿಕ್ಕಾಗಿಯೂ ಲಿಂಗಾಕಾರನಾಗಿ ಉದ್ಭವಿಸಿ ಶಶಿಗೆ ವರವಿತ್ತು ಗರ್ತದಲ್ಲಿ ಪರಶುರಾಮನನ್ನು ಪೂಜಿಸಲು ಗರ್ತದ ಮುಂಭಾಗದಲ್ಲಿದ್ದ ಪುಷ್ಕರಿಣಿಯ ಮಧ್ಯದಲ್ಲಿ ಲಿಂಗಾಕಾರದಿಂದ ಮೈದೋರಿದನು. ಲಿಂಗಾಕಾರನಾದ ಶಿವನನ್ನೇ ಇಂದು ಚಂದ್ರಮೌಳೀಶ್ವರನೆಂದು ಆರ್ಚಿಸುತ್ತ ಸೇವಿಸುತ್ತ ದರ್ಶನಗೈಯ್ಯುತ್ತ ಭಕ್ತರು ಧನ್ಯರಾಗುತ್ತಿದ್ದಾರೆ.

ಉಡುಪ ಎಂದರೆ ಚಂದ್ರ; ಆವನಿಗಾಗಿ ಶಿವನು ಮೈದೋರಿದ ಪ್ರದೇಶ ಉಡುಪವೆಂದಾಯ್ತು. (ಉಡೂನ್ ಪಾತಿ ಇತಿ ಉಡುಪಃ ನಕ್ಷತ್ರಗಳನ್ನು ಪಾಲಿಸುವವನಾದುದರಿಂದ ಚಂದ್ರನಿಗೆ ಉಡುಪನೆಂದು ಹೆಸರು. ಉಡು= ನಕ್ಷತ್ರ ಉಡುಪ' ವೇ ಉಡುಪಿಯೆಂದಾಯ್ತು, ಹೀಗೆ ಉಡುಪಿಯ ಉದಯ.

ಶಿವನು ಮೈದೋರಿದ ಗ್ರಾಮ ಶಿವಗ್ರಾಮ. ಗ್ರಾಮ= ಹಳ್ಳಿ= ಶಿವಳ್ಳಿಯ ಬ್ರಾಹ್ಮಣರೇ ಶಿವಳ್ಳಿ ಬ್ರಾಹ್ಮಣರು. 'ಶಾಂತತನುಃ ಶಂತನು; ಎಂಬಂತೆ

( ರಜತಪೀಠ= ಬೆಳ್ಳಿಯ ಮಣೆ. ಬೆಳ್ಳಿಯ ಮಣೆಯು ಪಾತಾಲತಲಗತವಾದ ಪ್ರದೇಶವಲ್ಲೇ ಮೈದೋರಿದ ಶಿವನು ಬೆಳ್ಳಿಪೀಠದ ಮೇಲೆ ( ರಜತ 'ಪೀಠ ಪುರ ಮಧ್ಯದಲ್ಲಿ ) ಲಿಂಗಾಕಾರನಾಗಿ ಮೈದೋರಿದ ಮೇಲೆ ರಜತ ಶಿವ ಶಿವರಜತ ಎಂದು ಪ್ರಸಿದ್ಧವಾಯ್ತು. ರಜತ= ಬೆಳ್ಳಿ ಪೀಠದ ಮೇಲಿರುವ ಶಿವ ಬೆಳ್ಳಿ ಎನಿಸಿ ಶಿವಬೆಳ್ಳಿಗ್ರಾಮದವರೇ ಶಿವಳ್ಳಿಯವರೆನಿಸಿದರು. ಶಿವ ಈಶ್ವರ ಬೊಳ್ಳಿ—ಚಂದ್ರ ಅದೇ ಶಿವಬೊಳ್ಳಿ, ಅಥವಾ ಶಿವಳ್ಳಿ ಇತ್ಯಾದಿ ಎಳೆದೊಯ್ದು ಅರ್ಥವನ್ನು ಮಾಡುವದು ಅಷ್ಟೊಂದು ಸೂಕ್ತವಾಗಿ ತೋರದಷ್ಟೆ!)

ಕಾಲಾನುಕ್ರಮದಲ್ಲಿ ವೇದಾಚಲದಲ್ಲಿ ಭಾರದ್ವಾಜ ಗೋತ್ರದ ಬ್ರಾಹ್ಮಣ

ನೋರ್ವನಿಗೆ ಸ್ವಪ್ನದಲ್ಲಿ ದರ್ಶನವಿತ್ತು ಶುಭಸೂಚನೆಯನ್ನಿತ್ತರು ಶ್ರೀ ಪರಶು ರಾಮದೇವರು. ಈ ಬ್ರಾಹ್ಮಣನು ಬಹುಭಕ್ತಿಯಿಂದ ದೇವರ ಸೇವೆಯಲ್ಲಿ ನಿರತನಾಗಿದ್ದನು. ದೇವರ ಸೂಚನೆಯಂತೆ ಚಂದ್ರಮೌಳೀಶ್ವರ ದೇವರನ್ನು ಸೇವಿಸುತ್ತ ಗರ್ತ್ತಕ್ಕೆ ಹಾಲೆರೆದನು. ಸಪತ್ನೀಕನಾದ ಆ ವಿಪ್ರವರ್ಯನ ಆರಾಧನೆಗೆ ಒಲಿದ ದೇವರು ಲಿಂಗರೂಪದಿಂದ ಅನಂತಾಸನನಾಗಿ ಉದ್ಭವಿಸಿದನು. ಹೀಗೆ 'ಕ್ಷೇತ್ರಮೂರ್ತಿ' ಶ್ರೀಮದನಂತಾಸನ ದೇವರನ್ನು ಬ್ರಾಹ್ಮಣೋತ್ತಮನು



ಶ್ರೀ ಚಂದ್ರಮೌಳೀಶ್ವರ ದೇವರು

ಪ್ರಸನ್ನೀ ಕರಿಸಿಕೊಂಡನು. ಶ್ರೀಮತ್ ಅನಂತಾಸನ ದೇವಸ್ಥಾನವೂ ಶ್ರೀ ಚಂದ್ರಮೌಳೀಶ್ವರ ದೇವಸ್ಥಾನವೂ ಉಡುಪಿಯಲ್ಲಿ ಪ್ರಸಿದ್ಧವಾದ ಪ್ರಾಚೀನ ದೇವಸ್ಥಾನಗಳು. ರುದ್ರನಿಗೆ ವರವಿತ್ತಂತೆ ಭದ್ರದಾಯಕ ಶ್ರೀಮದನಂತಾಸನನು ರಜತಪೀಠ ಪುರದ ಕ್ಷೇತ್ರ ಮೂರ್ತಿಯಾದನು.

ಶ್ರೀಚಂದ್ರಮೌಳೀಶ್ವರನ ದರ್ಶನ ಮೊದಲು ಆ ಮೇಲೆ ಶ್ರೀಮದನಂತಾಸನ ದರ್ಶನ ಮಾಡಬೇಕೆಂಬ ನಿಯಮವಿದೆ.

ಲಿಂಗಾಕಾರನಾದ ಅನಂತಾಸನ ಶ್ರೀ ಪರಶುರಾಮ ದೇವಾಲಯವೂ ರುದ್ರದೇವಾಲಯವೇ ಎಂಬುದಾಗಿ ಭಾವಿಸುವವರಿದ್ದಾರೆ. ಒಂದು ಕಾಲದಲ್ಲಿ ಈ ದೇವಾಲಯವು ಜೈನರ ಬಸತಿಯಾಗಿತ್ತೆಂದೂ ಹೇಳುವವರಿದ್ದಾರೆ. ಆದರೆ ರಜತಪೀಠಪುರ ಮಾಹಾತ್ಮ್ಯದಂತೆ ಈ ಭಾವನೆಗಳಿಗಾಸ್ಪದವಿಲ್ಲ. ಎರಡು ಶಿವಾಲಯಗಳು. ಒಂದರ ಎದುರು ಮತ್ತೊಂದು ಸ್ಥಾಪಿತವಾಗಬೇಕಾದ ಪ್ರಮೇಯ



ಶ್ರೀಮದನಂತಾಸನ ದೇವಸ್ಥಾನದ ಹೊರ ನೋಟ.

ವಿಲ್ಲ. ಆಚಾರ್ಯ ಮಧ್ವರನ್ನು ತಮ್ಮ ಬಾಲ್ಯದಲ್ಲಿ ಸಾಕ್ಷಾತ್ತಾಗಿ ಸಂದರ್ಶಿಸಿದ ಕವಿವರ್ಯರೂ ಶ್ರೀಮತ್ಸುಮಧ್ವವಿಜಯ ಮಹಾಕಾವ್ಯ ರಚಿತಾರರೂ ಕವಿಕುಲತಿಲಕ ಶ್ರೀಮತ್ರಿವಿಕ್ರಮ ಪಂಡಿತಾಚಾರ್ಯಸುತ ನಾರಾಯಣ ಪಂಡಿತಾಚಾರ್ಯರೂ ಅನಂತಾಸನನನ್ನು ಕರ್ದಮಪರಾಶರ ಪಾಂಡವರೇ ಮೊದಲಾದವರಿಂದ ಸಂಸೇವಿತನಾದ ಶ್ರೀನಾರಾಯಣನೆಂದೇ ಸಾರಿದ್ದಾರೆ.

ಶ್ರೀ ಚಂದ್ರಮೌಳೀಶ್ವರನದರ್ಶನವೇ ಮೊದಲು ಆ ಮೇಲೆ ಅನಂತಾಸನನ ದರ್ಶನ. ಅನಂತರ ಶ್ರೀ ಕೃಷ್ಣದರ್ಶನ ಮಾಡಿದರೇ ಮಹತ್ಫಲ ಪ್ರಾಪ್ತಿ ಎಂದು ಆಚಾರ್ಯ ಮಧ್ವರೇ ಸಂಪ್ರದಾಯ ಹಾಕಿ ಕೊಟ್ಟಿದ್ದಾರೆ.



ಶ್ರೀಮದನಂತಾಸನ ದೇವರು

ಪಾಂಡವರೇ ಶ್ರೀಮದನಂತಾಸನ ದೇವಾಲಯವನ್ನು ಕಟ್ಟಿಸಿದರೆಂದೂ ಹೇಳುವದನ್ನು ಕೇಳಿದ್ದೇನೆ. †

ಸ್ಥಳವಾಸಿಗಳು ಶ್ರೀಮದನಂತಾಸನ ಶ್ರೀ ಚಂದ್ರಮೌಳೀಶ್ವರ ದೇವರ ಭಕ್ತರಾಗಿ ರಾರಾಜಿಸುತ್ತ ಬಂದರು.

ಅನಂತರ ಶ್ರೀ ಪರಶುರಾಮ ದೇವರು ಉಡುಪಿಯಿಂದ ದಕ್ಷಿಣಕ್ಕೆ ಐದು ಮೈಲಿಗಳ ದೂರದಲ್ಲಿರುವ ಯೋಜನ ವಿಸ್ತೀರ್ಣ ಪರ್ವತದ ಅಗ್ರಕ್ಕೆ ಬಂದು ತನ್ನ ಪಾದ ತಾಡನದಿಂದ ಆ ಪರ್ವತದ ಸ್ವಲ್ಪಭಾಗವನ್ನು ಭುವಿಯಲ್ಲಿ ಅಡಗಿಸಿ ಪರಶು, ಧನು, ಗದಾ, ಬಾಣ ತೀರ್ಥಗಳೆಂಬ ನಾಲ್ಕು ತೀರ್ಥಗಳನ್ನು ರಚಿಸಿ ಬೆಟ್ಟದ ಮೇಲೆ ದುರ್ಗಾದೇವಿ (ಹರಿದುರ್ಗ)ಯನ್ನು ಪ್ರತಿಷ್ಠಿಸಿದರು,

ಈ ಬೆಟ್ಟಕ್ಕೆ 'ವಿಮಾನ ಗಿರಿ' ಎಂದೂ ಹೆಸರಿದೆ. ಅಂದು ಕಂಸನ ನಡು ನೆತ್ತಿಯನ್ನು ತುಳಿದು ನಭಕ್ಕೆ ಹಾರಿದ ದುರ್ಗಾದೇವಿ ಇಲ್ಲಿ ಬಂದುನಿಂತಳೆಂದೂ ಭಾವುಕರ ನಂಬಿಕೆ.

ಸಕಲ ದೇವತೆಗಳೂ ವಿಮಾನಾರೂಢರಾಗಿ ದುರ್ಗಾಪ್ರತಿಷ್ಠೆಗೆ ಆಗಮಿಸಿ ದ್ದುದರಿಂದ ವಿಮಾನಗಿರಿಯೆಂದು ಪ್ರಸಿದ್ಧವಾಯ್ತೆಂದೂ ಪುರಾಣಪ್ರಸಿದ್ಧವಿದೆ.

---

† ಉಡುಪಿಯಲ್ಲಿ ಆಚಾರ್ಯ ಮಧ್ವರು ಶ್ರೀ ಕೃಷ್ಣನನ್ನು ಪ್ರತಿಷ್ಠಿಸಿದ ನಂತರ ಶ್ರೀ ಕೃಷ್ಣ ದರ್ಶನಾರ್ಥಿಗಳಾಗಿ ಬಂದ ಶ್ರೀ ಪುರಂದರ ದಾಸರು ಶ್ರೀ ಕನಕದಾಸರು ಶ್ರೀ ವಿಜಯದಾಸರು ಮೊದಲಾದಅಪರೋಕ್ಷ ಜ್ಞಾನಿಗಳು ಅನಂ ತಾಸನ ಚಂದ್ರಮೌಳೀಶ್ವರರನ್ನು ಸ್ತುತಿಸಿದ ಪದ್ಯಗಳೊಂದೂ ದೊರೆತಿಲ್ಲ. ಕಾರಣ ತಿಳಿಯದು. ರಚಿಸಲೇ ಇಲ್ಲವೆನ್ನುವಂತಿಲ್ಲ. ಉಡುಪಿಯವರೇ ಆದ ಶ್ರೀ ವಾದಿರಾಜರ ಕನ್ನಡ ಕೃತಿಗಳಲ್ಲೂ ಈ ಬಗ್ಗೆ ಪದಗಳು ದೊರೆತಿಲ್ಲ. ಧವಳ ಗಂಗೆಯ ಗಂಗಾಧರ ಮಹಾಲಿಂಗ ಎಂಬ ಶ್ರೀ ವಾದಿರಾಜರ ಕೃತಿಯಲ್ಲಿ ಶಿವನ ವೈಭವ ವರ್ಣಿತವಾಗಿದ್ದರೂ ಉಡುಪಿಯ ಶ್ರೀ ಚಂದ್ರಮೌಳೀಶ್ವರನನ್ನು ಕುರಿತೇ ಹಾಡಿದಂತಿಲ್ಲ. ಅಲ್ಲವೆಂದು ಹೇಳಬೇಕಾಗಿಲ್ಲ ಆದರೆ ಶ್ರೀಮತ್ ಜಗನ್ನಾಥ ದಾಸರು ಪ್ರಶಿಷ್ಯರಾದ ಟುಪಾಕಿ ವೆಂಕಟರಮಣಾಚಾರ್ಯಕೃತ ಶ್ರೀಮದನಂ ತಾಸನ ಸ್ತುತಿ ಪರ ದೇವರ ನಾಮವಿದೆ.

ಈ ನಾಲ್ಕು ತೀರ್ಥಗಳಲ್ಲೂ ಒಂದೇ ದಿನ ಮಿಂದು ದುರ್ಗಾದರ್ಶನ ಗೈದರೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವವೆಂದು ಶ್ರೀ ಪರಶುರಾಮ ದೇವರ ಉಕ್ತಿ ಇದೆ.

ವಿಮಾನಗಿರಿಯ ಪಶ್ಚಿಮದಲ್ಲಿ ವಿಶಾಲವಾದ ಬಂಡೆಯ ಮೇಲೆ ಶ್ರೀ ಪರಶುರಾಮ ದೇವರು ಸನ್ನಿಹಿತರಾಗಿ ಪ್ರಪೂಜಿತರಾಗಿದ್ದಾರೆ. ಶ್ರೀ ಪರಶುರಾಮ ದೇವರ ಗುಡಿಯನ್ನು ಯಾತ್ರಿಕರು ಸಂದರ್ಶಿಸಲೇ ಬೇಕು. (ಈಗಂತೂ ವಾಹನ ಸೌಕರ್ಯ ಅಜೀರ್ಣವಾಗುವಷ್ಟು ಹೆಚ್ಚಿರುವ ದ. ಕ. ಜಿಲ್ಲೆಯಲ್ಲಿ ಉಡುಪಿಗೆ ಬಂದೂ ಸಂದರ್ಶಿಸಲೇಬೇಕಾದ ಆಸುಪಾಸಿನ ಪೌರಾಣಿಕ ಚಾರಿತ್ರಿಕ ಹಾಗೂ ಪ್ರಾಗತಿಕ ಲೌಕಿಕ ಪ್ರಸಿದ್ಧ ಸ್ಥಳಗಳನ್ನು ನೋಡದೇ ಹೋದರೆ ಓಡಿ ಹೋಗಿ ಗೋಡೆ ಮುಟ್ಟಿ ಬಂದ ಎಂಬ ಗಾದೆಯಂತೆಯೇ ಸರಿ.)

ಶ್ರೀ ಪರಶುರಾಮ ದೇವರ ಗುಡಿಯಿಂದ ಒಂದು ಮೈಲಿ ದೂರ ಪೂರ್ವದಲ್ಲಿ ಶ್ರೀಮನ್ಮಧ್ವಾಚಾರ್ಯರ ಅವತಾರ ಸ್ಥಳ ವಾಸುದೇವತೀರ್ಥ ಆಚಾರ್ಯರ ಹಿರಿಯರ ಮನೆ ಆಚಾರ್ಯರ ಪ್ರತಿಮೆಗಳೂ ಇವೆ, ಇವೆಲ್ಲವನ್ನೂ ಯಾತ್ರಿಕರು ನೋಡಲೇಬೇಕು.

ಉಡುಪಿಗೆ ಬಂದೂ ಹೋಟೆಲ್‌ನಲ್ಲಿ ಒಂದು ರಾತ್ರಿ ವಿಶ್ರಮಿಸಿ ಅಥವಾ ಸಿನಿಮಾ ನೋಡಿ ರಾತ್ರಿ ಮಲಗಿ ಬೆಳಗಾಗುತ್ತಲೂ ಎದ್ದು ತಮ್ಮ ಊರಿಗೆ ಹಿಂದಿರುಗುವ ಜಡಭರತರನ್ನೂ ರಸಿಕಗ್ರಾಮಣಿಗಳನ್ನೂ ಏನೆಂದು ತುತಿಸೋಣ !

ಉಡುಪಿಯ ಪೂರ್ವದಲ್ಲಿ ಇಂದ್ರಾಣೀ ಕ್ಷೇತ್ರವಿದೆ.

ದೈತ್ಯರಿಂದ ಪರಾಜಿತರಾದ ಇಂದ್ರದೇವ ಬಹುಕಾಲ ಅಡಗಿದ್ದಾಗ ಇಂದ್ರಾಣಿ ಈ ಸ್ಥಳಕ್ಕೆ ಬಂದು ತಪವನ್ನು ಗೈಯುತ್ತಿರಲು ವೇದಾಚಲ ವಾಸಿಗಳಾದ ಋಷಿಗಳು ಶುಚಿಸ್ಮಿತೆಯಾದ ಶಚಿಯನ್ನು ರಕ್ಷಿಸುತ್ತಿದ್ದರಂತೆ. ದೇವಗುರು ಬೃಹಸ್ಪತ್ಯಾಚಾರ್ಯರ ಚಾತುರ್ಯದಿಂದ ಇಂದ್ರನು ದೈತ್ಯರಿಂದ ಬಿಡುಗಡೆ ಹೊಂದಿ ದೇವಲೋಕದಲ್ಲಿ ರಾಣಿ ಪೌಲೋಮಿಯನ್ನು ಕಾಣದೆ ಅರಸುತ್ತಾ ಇಲ್ಲಿಗೆ ಬಂದು ದೇವಿಯನ್ನು ಕಂಡು ಹರ್ಷಿತನಾಗಿ ಇಲ್ಲಿರುವ ತೀರ್ಥದಲ್ಲಿ ಸ್ನಾನ ಮಾಡಿ ಗಂಗಾ ದೇವಿಯ ಸನ್ನಿಧಾನವಾಗುವಂತೆ ವರವಿತ್ತನು. ಇಲ್ಲಿ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರೂಪಗಳಿಂದ ಚತುರ್ಮೂರ್ತಿನಾರಾಯಣನ

ದೇವಸ್ಥಾನಗಳಿವೆ. ಇಂದ್ರಾಣೀ ತೀರ್ಥದಲ್ಲೂ ಮಂಗಳೂರಿನ ಕದ್ರಿಯ ಕೆರೆಗಳಂತೆ ನೀರು ಹೆಚ್ಚದು ಕಡಿಮೆಯಾಗದು ಎಂದಿಗೂ ಬತ್ತದು.

ಶ್ರೀ ಪರಶುರಾಮ ಸೃಷ್ಟಿಯಲ್ಲಿ ರಜತಪೀಠ, ಕುಮಾರಾದ್ರಿ, ಕೋಟೇಶ್ವರ, ಕುಂಭಾಸಿ ಶಂಕರನಾರಾಯಣ, ಕೊಲ್ಲೂರು, ಗೋಕರ್ಣಗಳೆಂಬ ಸಪ್ತ ಕ್ಷೇತ್ರಗಳೂ ಪುರಾಣೋಕ್ತ ಪ್ರಸಿದ್ಧ ಕ್ಷೇತ್ರಗಳು ಮುಕ್ತಿದಾಯಕ ಕ್ಷೇತ್ರಗಳು.

ಇವುಗಳಲ್ಲದೆ ಧರ್ಮಸ್ಥಳ ಮೊದಲಾಗಿ ಅನೇಕ ಮಹಿಮಾಪೂರ್ಣ ಕ್ಷೇತ್ರಗಳೂ ಸ್ಥಳ ಪುರಾಣ ದೃಷ್ಟಿಯಿಂದಲೂ ಚಾರಿತ್ರಿಕ ದೃಷ್ಟಿಯಿಂದಲೂ ವರ್ತಮಾನ ಕಾಲೀನ ಕಾರಣೀಕ ವೈಭವಗಳಿಂದಲೂ ದಕ್ಷ ಆಡಳಿತದಿಂದಲೂ ಭಕ್ತ ಜನರ ಭಕ್ತಿಯಿಂದಾಗಿಯೂ ಅರ್ಚಕರ ತಪಃ ಪ್ರಭಾವದಿಂದಲೂ ಸರ್ವ ವಿಧದಿಂದಲೂ ಜಗತ್ಪ್ರಸಿದ್ಧಗಳಾಗುತ್ತಿವೆ. ಉದಾ:— ಕಟೀಲು ಶ್ರೀ ದುರ್ಗಾಪರಮೇಶ್ವರೀ ದೇವಾಲಯ ಒಂದೇ ಸಾಕು. ಕೇವಲ ಹತ್ತಿಪ್ಪತ್ತು ವರ್ಷಗಳಲ್ಲಿ ಕಟೀಲಿನ ಪ್ರಗತಿಯನ್ನು ಕಣ್ಣಾರೆಕಂಡ ಯಾವ ಭಾವುಕನೂ ಬೆರಗಾಗದಿರಲಾರ. ಕಟೀಲಿನ ಪ್ರಗತಿ ಜಗತ್ತಿನ ಮಹಾ ಪವಾಡಗಳಲ್ಲಿ ಒಂದೆಂದರೆ ಸರ್ವಥಾ ಅತಿರಂಜಿತವೆನಿಸಲಾರದು.

## ಉಡುಪಿ ಶ್ರೀಕೃಷ್ಣ ಅನ್ನಬ್ರಹ್ಮ!

ಶ್ರೀಮದನಂತಾಸನ ದೇವರನ್ನು ಹನ್ನೆರಡು ವರ್ಷಗಳ ಕಾಲ ಸೇವಿಸಿದವರೂ ತಪಃಪೂರ್ಣರೂ ಸುಶಾಂತರೂ ದಾಂತರಾದ ಮಹಾನುಭಾವರಾದ ಶುದ್ಧಭಾಗವತ ಧರ್ಮನಿಷ್ಠರಾದ ಸದ್ಬ್ರಾಹ್ಮಣ ಕುಲೋತ್ತಮರಾದಮಧ್ಯಗೇಹ ನಡುಮನೆ ತುಳುಭಾಷೆಯಲ್ಲಿ ನಡ್ಯಂತಿಲ್ಲಾಯರೆಂದು ) ಸುವಿಖ್ಯಾತರಾದ ವಿದ್ವದ್ವರೇಣ್ಯರು.

ಇವರು ತೌಳವ ಬ್ರಾಹ್ಮಣರು. ರಾಮಭೋಜರಾಜನ ನಂತರವೂ ಬಹುಕಾಲದ ಮೇಲೆ ಉದಯಪುರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಈ ಪ್ರದೇಶವನ್ನಾಳುತ್ತಿದ್ದ ಮಯೂರವರ್ಮನೆಂಬ ರಾಜನು ಪರಮ ಧಾರ್ಮಿಕನಾಗಿದ್ದನು.

ಈ ಮಧ್ಯದಲ್ಲಿ ಈ ಪ್ರದೇಶ ಕದಂಬ ವಂಶದ ರಾಜರ ಆಳ್ವಿಕೆಗೂ ಒಳಪಟ್ಟು ಕ್ರಮೇಣ ಕಾರಣಾಂತರದಿಂದ ಸೂರ್ಯವಂಶದ ಹೇಮಾಂಗನ ವಶ

ವಾಗಿ ಅವನ ಪುತ್ರ ಮಯೂರವರ್ಮನು ರಾಜನಾದನು. ಕದಂಬ ವಂಶದವ ರಾಳುವಾಗ ಕುಂದಾಪುರದ ಸಮೀಪದಲ್ಲಿರುವ ಬಸರೂರು ರಾಜಧಾನಿಯಾಗಿತ್ತು ಮಯೂರವರ್ಮನ ಕಾಲದಲ್ಲಿ ಪುನಃ ಉದಯಪುರವೇ ರಾಜಧಾನಿಯಾಯಿತು. ಅದಾವುದೋ ಕಾರಣದಿಂದ ಈ ಪ್ರದೇಶದ ಬ್ರಾಹ್ಮಣರು ಶಾಪಗ್ರಸ್ತರಾಗಿ ಕಳಾವಿಹೀನರಾಗಿ ಯಜ್ಞಾದಿ ಸತ್ಕರ್ಮಗಳು ನಿಂತುಹೋಗಲು ಅಹಿ ಚ್ಛತ್ರದಿಂದ ಶ್ರೇಷ್ಠರಾದ ಬ್ರಾಹ್ಮಣರನ್ನು ಕರೆಸಿ ಅನೇಕ ಯಜ್ಞವನ್ನು ಮಾಡಿಸಿ ರಾಜನಾದಮಯೂರವರ್ಮನು ಕೃತಾರ್ಥನಾದನು. ಈ ಬ್ರಾಹ್ಮಣರು ಸ್ವದೇಶಕೆ ಮರಳಿದರು. ಪುನಃ ಯಜ್ಞಾದಿಗಳು ನಿಲ್ಲಲು ಮಯೂರವರ್ಮನ ಪುತ್ರ ಚಂದ್ರಕಾಂತನು ಪುನಃ ಅಹಿಚ್ಛತ್ರದ ಬ್ರಾಹ್ಮಣರನೇಕರನ್ನು ಕರೆಸಿ ಯಜ್ಞಾದಿ ಸತ್ಕರ್ಮಗಳು ಯಥಾವಾಗಲೂ ನಡೆಯುವಂತೆ ತುಳುನಾಡಿನಲ್ಲಿ ಪತ್ನ್ಯಾದಿಗಳನ್ನು ನೀಡಿ ಇಲ್ಲೇ ನಿಲ್ಲಿಸಿಕೊಂಡನು.ಇವರೇ ತೌಳವ ಬ್ರಾಹ್ಮಣರು. ಈ ಬ್ರಾಹ್ಮಣರ ವಂಶದಲ್ಲೇ ಶ್ರೀಮಧ್ಯಗೇಹ ಭಟ್ಟರು ಪುರಾಣವಾಚನ ಕೋವಿದರೆನಿಸಿ ರಾರಾಜಿಸಿದರು.

ಈ ಪುಣ್ಯಪುರುಷರೂ ಇವರ ಧರ್ಮಪತ್ನಿಯೂ ಅದಿತಿ ಕಶ್ಯಪರಂತೆ ಶ್ರೀಮದನಂತಾಸನ ದೇವರನ್ನು ಸೇವಿಸಿ ಶ್ರೀ ಮುಖ್ಯಪ್ರಾಣ ದೇವರನ್ನೇ ಪುತ್ರ ನನ್ನಾಗಿ ಪಡೆದು ಧನ್ಯರಾದರು. ಮಗುವಿಗೆ ವಾಸುದೇವನೆಂದು ನಾಮಕರಣ ಮಾಡಿದರು. ಚೌಲ ಉಪನಯನಗಳೂ ನಡೆದವು. ವಟು ವಾಸುದೇವನು ಸಾಮಾನ್ಯ ವಟುವೇ! ಕಲಿಯುಗದಲ್ಲಿ ಶ್ರೀ ವಾಮನದೇವರ ಅವತಾರ ಲೀಲೆ ಗಳನ್ನು ಜನಗಳಿಗೆ ತಿಳಿಸಲಿಕ್ಕಾಗಿ ಅವತರಿಸಿದಂತೆ ಸರ್ವಜ್ಞ ವಟುವೆಂದು ಸುವಿ ಖ್ಯಾತನಾದನು. ಕೈಶೋರಲೀಲೆ ಬಾಲಲೀಲೆಗಳಿಂದ ಜನಮುದ್ದು ಮಗುವಾಗಿದ್ದ ವಾಸುದೇವ ಎಳೆತನದಲ್ಲೆ ಸನಕಾದಿಗಳ ಪರಂಪರೆಯಲ್ಲಿ ಬಂದು ಪರಮಹಂಸ ಪರಿವ್ರಾಜಕಾಚಾರ್ಯರೆನಿಸಿದ ಶ್ರೀಮದಚ್ಯುತಪ್ರೇಕ್ಷಾಚಾರ್ಯರಿಂದ ಸನ್ಯಾಸ ಆಶ್ರಮವನ್ನು ಸ್ವೀಕರಿಸಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಎಂಬುದಾಗಿ ಆಚತುರ್ದಶ ಲೋಕಗಳಲ್ಲಿ ಸುವಿಖ್ಯಾತರಾದರು. ಇವರೇವೇದ ಪ್ರತಿಪಾದ್ಯರಾದ ಜಗದ್ಗುರುಗಳಾದ ಹನುಮ ಭೀಮ ಮಧ್ವರೆಂದೂ ಅವತಾರ ತ್ರಯೋಪೇತರಾದ ಧರ್ಮಸಂಸ್ಥಾಪನಾಚಾರ್ಯರೆಂದೂ ಲೋಕಲೋಕಗಳಲ್ಲಿ

ವಿಖ್ಯಾತರಾದ ಶ್ರೀಮನ್ಮಧ್ವಾಚಾರ್ಯರು. ಶ್ರೀಪೂರ್ಣಬೋಧರು, ಸುಖ ತೀರ್ಥರು, ಮೋದಮುನಿಗಳೂ, ಸರ್ವಜ್ಞರು.

ಈತನೇ ಲೋಕಗುರು ವೇದವಿಖ್ಯಾತ। ಭೂತಳದಿ ಶ್ರೀರಾಮದೂತನೆಂಬಾತ॥
—ಶ್ರೀ ವಾದಿರಾಜರು.

ಶ್ರೀತತ್ವವಾದ ಮತವನ್ನು ಸುಸ್ಥಾಪಿಸಿದರು. ಮೂವತ್ತೇಳು ಮಹಾಗ್ರಂಥ ಗಳನ್ನು ರಚಿಸಿದರು. ಶ್ರೀಕೃಷ್ಣ ಪರಮಾತ್ಮನ ದಿವ್ಯಮಂಗಳ ಮೂರ್ತಿಯನ್ನು ಉಡುಪಿಯಲ್ಲಿ ಪ್ರತಿಷ್ಠಿಸಿ ಅಷ್ಟಮಠದ ಬಾಲಬ್ರಹ್ಮಚಾರಿ ಯತಿಗಳನ್ನು ಶ್ರೀ



ಉಡುಪಿ ಶ್ರೀ ಕೃಷ್ಣ ಮಠದಲ್ಲಿರುವ ಶ್ರೀ ಗರುಡ ದೇವರು

ಕೃಷ್ಣನ ಮಹಾಪೂಜೆಗೆ ನೇಮಕ ಮಾಡಿದರು.

ಉಡುಪಿ ಶ್ರೀಕೃಷ್ಣ ಅನ್ನಬ್ರಹ್ಮ ತಿರುಪತಿ ಶ್ರೀನಿವಾಸ ಕಾಂಚನಬ್ರಹ್ಮ
ಪಂಡರಾಪುರ ವಿಠ್ಠಲ ನಾದಬ್ರಹ್ಮ.

ಶ್ರೀ ಕೃಷ್ಣ ಅವತಾರದಲ್ಲೇ ಶ್ರೀನಿವಾಸ ವಿಠ್ಠಲನಾಮಗಳಿಂದಲೂ ಕರೆಸಿಕೊಂಡು ಈ ಮೂರು ಕ್ಷೇತ್ರದಲ್ಲೂ ಶ್ರೀ ಕೃಷ್ಣಮೂರ್ತಿಯೇ ನಿಂತಿದ್ದಾನೆ. ( ಮತ್ಸ್ಯ, ಕೂರ್ಮ, ವರಾಹ, ನರಹರಿ, ವಾಮನ, ಪರಶುರಾಮ, ರಾಮ ಕೃಷ್ಣ, ಬುದ್ಧ, ಕಲ್ಕಿ ಇವು ಹತ್ತು ಅವತಾರಗಳು–ಒಬ್ಬ ಪ್ರಸಿದ್ಧ ಪಾತ್ರಧಾರಿಯು ಬೇರೆ ಬೇರೆ ನಾಟಕಗಳಲ್ಲಿ ಮುಖ್ಯ ಪಾತ್ರ ವಹಿಸಿದಂತೆ ನಾರಾಯಣನ ವಿಷ್ಣುವಿನ ದಶಾವತಾರಗಳು. ಆದರೆ ಶ್ರೀಕೃಷ್ಣ ಶ್ರೀನಿವಾಸ ವಿಠ್ಠಲ ಇವು ಮೂರೂ ಒಂದೇ ಅವತಾರ ಮೂರು ಹೆಸರು. ಹೇಗೆಂದರೆ ಚತುರನಾದ ಪಾತ್ರಧಾರಿಯೊಬ್ಬನು ನಾಟಕವನ್ನು ಕಳೆಗಟ್ಟಿಸಲು ಒಂದೇ ನಾಟಕದಲ್ಲಿ ಸಂದರ್ಭಾತ್ತ್ವೇನ ಬೇರೆಬೇರೆ ಪಾತ್ರಗಳನ್ನು ವಹಿಸಿದಂತೆ )



ಉಡುಪಿ ಮಠದ ಸಂಕ್ರಮಣೋತ್ಸವ

ಈ ಅನ್ನಬ್ರಹ್ಮ ಬಾಲಗೋಪಾಲಕೃಷ್ಣನ ಮೂರ್ತಿಯನ್ನು ನಿರ್ಮಿಸಿದವ ದೇವಶಿಲ್ಪಿ ವಿಶ್ವಕರ್ಮ. ಕಾರಣ ಬಹು ಸ್ವಾರಸ್ಯವಿದೆ. ಒಮ್ಮೆ ದ್ವಾರಕೆಯಲ್ಲಿ ದೇವಕೀದೇವಿ ಕೃಷ್ಣನ ಬಾಲಲೀಲೆ ನೋಡಲು ಅಪೇಕ್ಷಿಸಿದಾಗ ಶ್ರೀಕೃಷ್ಣನು ತಾಯಿಯನ್ನು ಆನಂದ ಪಡಿಸಲು ತನ್ನ ಬಾಲಲೀಲೆಗಳನ್ನೆಲ್ಲಾ ತೋರುತ್ತಿರಲು ದೇವಿ ರುಕ್ಮಿಣಿಯೂ ಮರೆಯಲ್ಲಿ ನಿಂತು ಎಲ್ಲವನ್ನೂ ನೋಡಿ ಆನಂದ ಭರಿತಳಾಗಿ ಆನಂದಕಂದನು ಕಡಗೋಲು ನೇಣುಪಿಡಿದ ರೂಪವನ್ನೂ ಲೀಲೆಯನ್ನೂ ಬಲು ಮೆಚ್ಚಿ ಅಂಥದೇ ಮೂರ್ತಿಯನ್ನು ಮಾಡಿಸಿಕೊಡಲು ಕೇಳಿದಾಗ (ಹೆಂಗಸರಿಗೆ ಯಜಮಾನರ ಬಾಲ್ಯದ ತುಂಟಾಟದ ಭಾವಚಿತ್ರ (Photo)



ಉಡುಪಿ ಶ್ರೀಕೃಷ್ಣನ ದರ್ಶನಗೈಯುವ ನವಗ್ರಹ ಕಿಟಕಿ

ನೋಡಿದಷ್ಟೂ ನೋಡೋಣವೆಂಬ ಹುಚ್ಚು ಹೆಚ್ಚುಂತೆ. ಹಾಗೆ) ಶ್ರೀಕೃಷ್ಣನು ವಿಶ್ವಕರ್ಮನನ್ನು ಕರೆಸಿ ತನ್ನ ಬಾಲರೂಪ ತೋರಲು ಪರಮಾನಂದ ಭರಿತನಾದ ವಿಶ್ವಕರ್ಮನು ಅಂಥದೇ ಮೂರ್ತಿಯನ್ನು ನಿರ್ಮಿಸಿ ಕೊಟ್ಟನಂತೆ ಇಂದಿರೆಗೆ ಹರಿ ಮಂದಿರೆಗೆ ರುಕ್ಮಿಣೀ ದೇವಿಗೆ. ದೇವಿ ಆ ಮೂರ್ತಿಯನ್ನು ನಿತ್ಯವೂ ಪೂಜಿಸುತ್ತಿರಲು ಶ್ರೀ ಕೃಷ್ಣನು ಅವತಾರ ಮರೆಗೊಳಿಸಿದ ನಂತರ ಆ ಪ್ರತಿಮೆ ಅರ್ಜುನನಿಂದ ಪೂಜಿತವಾಗಿ (ಪಾಂಡವರ ವಂಶದ ಕ್ಷೇಮಕಾಂತ ರಾಯನ ತನಕ ಪೂಜಿತವಾಗಿ ಮುಂದೆ ಭೂಗತವಾಗಿ ಗೋಪಿಚಂದನದ ಮುದ್ದೆಯಿರುವ ಮಡುವಿನಲ್ಲಿ ಸೇರಿ ಆ ಪ್ರದೇಶಕ್ಕೆ ಬಂದ ಹಡಗಿನ ಯಜಮಾನನೊಬ್ಬನು ಹಡಗಿನ ತೂಕಕ್ಕೆ ಬೇಕಾಗಿ ಈ ಪ್ರದೇಶದ ಮಣ್ಣಿನ ರಾಶಿಯನ್ನು ಹಡಗಿನಲ್ಲಿತುಂಬಿಕೊಂಡು ಪಶ್ಚಿಮಸಮುದ್ರ ಕರಾವಳಿಯಲ್ಲಿ ಬರುತ್ತಿರಲು ಬಿರುಗಾಳಿಗೆ



ಉಡುಪಿಯ ಶ್ರೀ ಸುಬ್ರಹ್ಮಣ್ಯ ದೇವರು

ಹಡಗು ಮುಳುಗುವ ಪರಿಸ್ಥಿತಿಯನ್ನು ಮುಟ್ಟಿದಾಗ ದಡದಲ್ಲಿ ಕುಳಿತ ಪರಮಹಂಸ ಕುಲಗುರುಗಳ ಕಾವಿಶಾಟಿಯ ಬೀಸುವಿಕೆಯಿಂದಾಗಿ ತಾವೆಲ್ಲ ವಿಪತ್ತಿನಿಂದ ಪಾರಾದುದನ್ನು ತಿಳಿದು ಥಡಕ್ಕೆ ಬಂದು ಪ್ರಾಣರಕ್ಷಣೆ ಮಾಡಿದ ಸಾಕ್ಷಾತ್ ಮುಖ್ಯಪ್ರಾಣಾವತಾರಿಗಳಾದ ಶ್ರೀ ಮಧ್ವರಿಗೆ ರತ್ನ ರಾಶಿಯನ್ನು ಕಾಣಿಕೆಯಾಗಿ ಅರ್ಪಿಸಿ ನಮಿಸಿ ಕರ ಜೋಡಿಸಿ ನಿಂತಿರಲು ರತ್ನರಾಶಿ ಸಂನ್ಯಾಸಿಗಳಾದ ತಮಗೆ ಬೇಕಿಲ್ಲ. ಗೋಪೀ ಚಂದನದ ರಾಶಿ ಸಾಕೆನ್ನಲು ಆ ರಾಶಿಯನ್ನು ಒಪ್ಪಿಸಿದನಂತೆ. ಕಳ್ಳ ಕೃಷ್ಣ ಎಲ್ಲಡಗಿದ್ದರೂ ಅವನನ್ನು ಹುಡುಕದೆ ಭಕ್ತಶ್ರೇಷ್ಠರು ಬಿಟ್ಟಾರೇ! ಗೋಪೀಚಂದನ ಉಂಡೆಯಲ್ಲಡಗಿದ್ದ ಗೋಪೀಜನ ಮನೋವಲ್ಲಭನಾದ ಶ್ರೀಪತಿ ಶ್ರೀ ಕೃಷ್ಣನ ಪ್ರತಿಮೆಯನ್ನು ಆನಂದದಿಂದ ಆನಂದ ತೀರ್ಥರು ಸ್ವೀಕರಿಸಿ ದ್ವಾದಶ ಸ್ತೋತ್ರವನ್ನು ಹೇಳುತ್ತಾ ಉಡುಪಿಗೆ ತಂದು ವಿಧಿಪ್ರಕಾರವಾಗಿ ಆನಂದಕಂದನ ಮೂರ್ತಿಯನ್ನು ಶ್ರೀಮದ್ರಜತ ಪೀಠದಲ್ಲಿ ಸ್ಥಾಪಿಸಿದರು. ಅಂದಿರಿಸಿದ ನಂದಾನಂದಾ ಮೊದಲಾದ ದೀಪಗಳ ಪ್ರಕಾಶದಲ್ಲಿ ನಿಂದಿರುವ, ಸುಂದರೀ ಮಂದಿರನಾದ ಇಂದಿರಾನಂದಕನಾದ ಆನಂದಮಯ ವಿಗ್ರಹನಾದ ಆನಂದ ತೀರ್ಥವರದನು ತನ್ನ ದರ್ಶನ ಮಾತ್ರದಿಂದಲೇ ಪರಮಾನಂದವನ್ನು ಭಕ್ತರಿಗೆ ನೀಡುತ್ತಿರುವನು.



ಕಾಣಿಯೂರು ಮಠದ ಶ್ರೀಗಳವರು ಮತ್ತು ಸೋದೆ ಮಠದ ಶ್ರೀಗಳವರು

ಎಂಟುನೂರು ವರ್ಷಗಳಿಂದಲೂ ನಿತ್ಯವೂ ಅವ್ಯಾಹತವಾಗಿ ಸಹಸ್ರ ಜನರಿಗೆ ಕಡಿಮೆಯಿಲ್ಲದಂತೆ ಸದನ್ನದಾನ ವಿಶೇಷ ಉತ್ಸವಾದಿ ದಿನಗಳಲ್ಲಿ ಐದು ಹತ್ತು, ಇಪ್ಪತ್ತು ಸಹಸ್ರ ಜನರಿಗೆ ಇಂಥ ವಿತರಣೆಯಿಂದ ಶುಚಿ ರುಚಿ ಸುಪಕ್ವಾನ್ನ ದಾನ ದಕ್ಷಿಣೆಗಳಿಂದ ಜಗತ್ತನ್ನೇ ಬೆರಗು ಗೊಳಿಸುತ್ತಿರುವ ಕ್ಷೇತ್ರ ಬೇರಾವುದಿದೆ? ಜಗತ್ತಿನಲ್ಲಿ ಎಲ್ಲರೂ ಅನ್ನಕ್ಕಾಗಿ ಶ್ರಮಿಸಲೇ ಬೇಕು. ಅನ್ನವಿಲ್ಲದೆ ಬದುಕಿ ಉಳಿಯುವ ಪ್ರಾಣಿ ಹುಟ್ಟಿದ ಪ್ರಾಣಿಗಳಲ್ಲಿ ಯಾವುದಿದೆ? ಇಂತಿರಲು ಅನ್ನಗತಪ್ರಾಣವೆಂಬ ಆರ್ಯೋಕ್ತಿಯೇ ಇರಲು ಸತ್ ಅನ್ನದಾನಕ್ಕೆ ಆದರ್ಶವಾದ ಕ್ಷೇತ್ರ ಉಡುಪಿಯಲ್ಲದೆ ಬೇರಾವುದು.?

ಅನ್ನ ಹೊಟ್ಟೆಗೆ ಬಿದ್ದರೆ ಸಾಕೇ ಸುಜ್ಞಾನ ಆರ್ಜನೆಯಹಸಿವೂ ಇರಬೇಕು. ಇಲ್ಲವಾದರೆ ಇತರ ಪ್ರಾಣಿಗೂ ಮಾನವನಿಗೂ ವ್ಯತ್ಯಾಸವೇನು? ಅಂದಿನಿಂದ ಇಂದಿನತನಕ ಅವ್ಯಾಹತವಾಗಿ ನಿತ್ಯವೂ ಸಹಸ್ರ ಸಹಸ್ರ ಬ್ರಹ್ಮವಿದ್ಯಾ ಅಭ್ಯಾಸಿಗಳಿಗೆ ಸದ್ವಿದ್ಯಾದಾನದೊಂದಿಗೆ ಸಚ್ಛಾಸ್ತ್ರಜ್ಞಾನವನ್ನು ಒದಗಿಸುವ ಸಾತ್ವಿಕ ಶಿಕ್ಷಣ ಪದ್ಧತಿಯು ಯೋಗ್ಯ ಬುನಾದಿಯಲ್ಲಿ ಗುರುಕುಲ ಪದ್ಧತಿಯಂತೆ ಬೆಳೆದು ಬಂದಿರುವ ಕ್ಷೇತ್ರ ಉಡುಪಿಯಂತೆ ಬೇರೆಲ್ಲಿದೆ.?

ಈಗಂತೂ ಅಶೇಷ ಲೌಕಿಕ ವೈದಿಕ ವಿದ್ಯಾರ್ಥಿಗಳಿಗೂ ಇಲ್ಲಿ ದೊರಕಿರುವ ಆಶ್ರಯ ಸಾಮಾನ್ಯವೇ? ಹೊಟ್ಟೆಗೆ ಸದನ್ನ ಬುದ್ಧಿಗೆ ಅನ್ನನಾಮಕನನ್ನರಿಯಲು ಸಹಯುಕವಾಗುವ ಸದ್ವಿದ್ಯೆಯೆಂಬ ಅನ್ನ ಬೇರೆಲ್ಲಿದೆ ಈ ಪ್ರಕಾರ?

ಇನ್ನು ಯಾತ್ರಿಕರು ಅಗತ್ಯ ಸಂದರ್ಶಿಸಬೇಕಾದುದು:—ಶ್ರೀಮದುಡುಪಿ ಕ್ಷೇತ್ರಪ್ರವೇಶಾನಂತರ ಕನಕ ಮಂಟಪ ಕನಕನ ಕಿಂಡಿ ಶ್ರೀಮಧ್ವಸರೋವರ ಶ್ರೀ ಚಂದ್ರಮೌಳೀಶ್ವರ ಶ್ರೀಮದನಂತಾಸನ ದೇವರ ಗುಡಿಗಳು ಶ್ರೀ ಕೃಷ್ಣಮಠ, ಅಷ್ಟಮಠಗಳೂಇತರ ಮಠಗಳೂ ದೇವಸ್ಥಾನಗಳೂ, ಒಡಭಾಂಡೇಶ್ವರ, ಪಾಜಕ ಕ್ಷೇತ್ರದ ದುರ್ಗಾ ಬೆಟ್ಟ ಇವುಗಳಲ್ಲದೆ, ಕಡಿಯಾಳಿ, ಬೈಲೂರು, ಪುತ್ತೂರು, ಕನರ್ಪಾಡಿ ( ದುರ್ಗಾಲಯಗಳು ), ಮುಚ್ಚಿಲಕೋಡು, ತಾಂಗೋಡು, ಮಾಂಗೋಡು, ಅರಿತೋಡು (ನಾಗಆಲಯಗಳು) ಅಂಬಲಪಾಡಿ ಜನಾರ್ದನ ಹಾಗೂ ಕಾಳಿದೇವಿ ಗುಡಿಗಳು ಇಂದ್ರಾಣಿ ಕ್ಷೇತ್ರ-ಲೌಕಿಕ ಅಭಿವೃದ್ಧಿಗೊಂಡ ಮಣಿಪಾಲ ಮೊದಲಾದ ಸ್ಥಳಗಳು ಎಲ್ಲಾ ಹತ್ತೆಂಟು ಮೈಲಿಗಳ ಒಳಗೇ ಇವೆ.



ವಡಭಾಂಡೇಶ್ವರದ ಶ್ರೀ ಬಲರಾಮದೇವರು

ಶ್ರೀಕೃಷ್ಣನ ಸನ್ನಿಧಾನದಲ್ಲಿ:—ಪ್ರಾತಃಕಾಲ ನಿರ್ಮಾಲ್ಯ ವಿಸರ್ಜನೆ ಪೂಜೆ, ಉಷಃ ಕಾಲ ಪೂಜೆ, ಶ್ರೀ ಕೃಷ್ಣ ಪೂಜೆಯೊಂದಿಗೆ ಗೋಪೂಜೆ, ಪಂಚಾಮೃತ ಪೂಜೆ, ಉದ್ವರ್ತನ ಪೂಜೆ, ತೀರ್ಥ ಪೂಜೆ, ಅಲಂಕಾರ ಪೂಜೆ, ಅವಸರ ಸನಕಾದಿ ಪೂಜೆ, ಮಹಾಪೂಜೆ, ಶ್ರೀ ಮುಖ್ಯಪ್ರಾಣ ಮಧ್ವರ ಪೂಜೆ, ಗರುಡದೇವರ ಪೂಜೆ, ಇವೆಲ್ಲ ನಡೆದ ನಂತರ ತೀರ್ಥ ಪ್ರಸಾದ, ಸಾಯಂಕಾಲ ದೀವಟಿಗೆ ಸೇವೆ ರಾತ್ರಿ ಪೂಜೆ, ಏಕಾಂತ ಸೇವೆ.

ಈ ಮಧ್ಯದಲ್ಲಿ ಪಾಠ ಪ್ರವಚನ, ಪಾರಾಯಣ, ಪುರಾಣ, ಹರಿಕಥಾ ಭಜನಾದಿಗಳು ನಡೆಯುವವು. ವಾದ್ಯ ನಗಾರಿ ಕದೋಣಿ ( ಗುಂಡು ಹಾರಿಸುವ ಕ್ರಮದಿಂದಲೇ ) ಇಂಥಾ ಪೂಜೆಯೇ ನಡೆಯುತ್ತಿದೆ ಈಗ ಎಂಬುದನ್ನು



ಉಡುಪಿ ಶ್ರೀ ಕೃಷ್ಣ ಮಠದಲ್ಲಿರುವ ಶ್ರೀ ಮುಖ್ಯಪ್ರಾಣ ದೇವರು

ಸುತ್ತುಮುತ್ತಲಿನ ಒಂದೆರಡು ಮೈಲಿಗಳ ತನಕದ ಜನರು ತಿಳಿಯಲು ಸಾಧ್ಯ. ಘುಹಾದ್ವಾರದಲ್ಲಿ ಶ್ರೀ ಮಧ್ವ ಸರೋವರದಲ್ಲಿ ಸ್ನಾನಗೈದು ಪ್ರವೇಶಿಸಿ ಶ್ರೀ ಶ್ರೀ ಕೃಷ್ಣ ಮಠದೊಳಗೆ ಸಿಂಹಾಸನ, ಶ್ರೀ ಸುಬ್ರಹ್ಮಣ್ಯ ದೇವರ ಗುಡಿ, ವಸಂತ ಮಹಲು, ಬಡಗು ಮಾಳಿಗೆ, ವೃಂದಾವನಗಳು, ಅಶ್ವತ್ಥಕಟ್ಟೆ, ಛತ್ರಗಳು, ಗೋ ಶಾಲೆ, ಮುಸುರೆ ತೊಳೆಯುವ ಕೆರೆ, ಆನೆಕಟ್ಟಿರುವ ಸ್ಥಳ, ಕಟ್ಟಿಗೆರಥ, ಭೋಜನ ಶಾಲೆ, ಚೌಕಿ, ಮೃಷ್ಟಾನ್ನಶಾಲೆಗಳು, ಪಾಕಶಾಲೆ, ಹಾಲು ಮೊಸರಿನ ಮನೆ, ಇವನ್ನೆಲ್ಲಾ ನೋಡಲು ಮರೆಯಬಾರದು.

ಅಂತೆಯೇ ಶ್ರೀ ಮಧ್ವಸರೋವರದ ದಡದಲ್ಲಿ ನೈಋತ್ಯ ಮೂಲೆಯಲ್ಲಿ ಭಾಗೀರಥೀ ಗುಡಿ. ರಥಬೀದಿಯಲ್ಲಿ ನಾಲ್ಕುಸುತ್ತಿನಲ್ಲಿ ಅಷ್ಟಮಠಗಳೂ ಇತರ ಮಠಗಳೂ, ರಥಗಳ ಕೊಟ್ಟಿಗೆ, ರಜತರಥ, ಶ್ರೀಕೃಷ್ಣ ಮಠದೊಳಗೆ ರಜತ ಪಾಲಕಿ, ತೊಟ್ಟಿಲು, ಸುವರ್ಣ ಪಾಲಕಿ, (ಮುಂದೆ ಸದ್ಯದಲ್ಲೇ ಚಿನ್ನದ ತೊಟ್ಟಿ ಲನ್ನೂ ನೋಡಲಿದ್ದೇವೆ.) ಇವೆಲ್ಲವನ್ನೂ ನೊಡಬೇಕು



ಮಧ್ವ ಸರೋವರದ ಭಾಗೀರಥಿ ಗುಡಿ

ಯಾತ್ರಿಕರು ಶ್ರೀಮಂತರಿರಲಿ ಬಡವರಿರಲಿ ಶ್ರೀಕೃಷ್ಣಮಠದವರೂ ಇತರ ಮಠಗಳವರೂ ಸ್ಥಳದವರೂ ಸಾಧ್ಯವಾದ ಮಟ್ಟಿಗೂ ತಮ್ಮನ್ನು ಕೇಳಿದವರಿಗೆ ಅಥವಾ ಕೇಳದೆ ಹೋದರೂ ಅವಕಾಶವಿದ್ದರೆ ಯಾತ್ರಿಕರಿಗೂ ಅಪೇಕ್ಷೆಯಿದ್ದರೆ ತಮಗೆ ತಿಳಿದಷ್ಟಾದರೂ ಅವಶ್ಯ ನೋಡಲೇಬೇಕಾದ ವಿಚಾರಗಳನ್ನೆಲ್ಲಾ ತಿಳಿಸುವದು ತೋರಿಸುವದು ಸೌಜನ್ಯ ಮತ್ತು ಪುಣ್ಯಪ್ರದಕಾರ್ಯ.

ಮಠ ದೇವಸ್ಥಾನಗಳಲ್ಲಿ ಉನ್ಮತ್ತರನ್ನು ಅನ್ನ ಬಟ್ಟೆ ಕೈತುಂಬ ಸಂಬಳ ಗಿಂಬಳಕೊಟ್ಟು ಸಾಕುವದಕ್ಕಿಂತ ನಾಲ್ಕಾರು ಗೂಳಿಗಳನ್ನು ಸಾಕಬಾರದೇಕೆ?



ಕಟ್ಟಿಗೆ ರಥ

ಇನ್ನು ಉಡುಪಿಯಲ್ಲಿ ನಿತ್ಯೋತ್ಸವ ಸದಾ ದೇವರ ದರ್ಶನ. ಮಹೋತ್ಸವಾದಿ ದಿನಗಳಲ್ಲಿ ದೇವರ ದರ್ಶನಕ್ಕೆ ಹತ್ತಿಪ್ಪತ್ತು ನಿಮಿಷ ಕಾಯಬೇಕಾಗಬಹುದು.

ಉತ್ಸವಗಳಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿ ವಿಠ್ಠಲ ಭಾಂಡ (ವಿಟ್ಲಪಿಂಡಿ) ಉತ್ಸವ, ಲಕ್ಷದೀಪೋತ್ಸವ, ಸಪ್ತೋತ್ಸವ (ಮುಖ್ಯ ಮಕರ ಸಂಕ್ರಮಣೋತ್ಸವ ಸುವರ್ಣ ಉತ್ಸವ (ಚೂರ್ಣೋತ್ಸವ) ಎರಡು ವರ್ಷಗಳಿಗೊಮ್ಮೆ ಪರ್ಯಾಯ ಏಳುವ ಮತ್ತು ಕೂಡುವ ದಿನಗಳ ಉತ್ಸವ ಇತರ ದಿನಗಳಲ್ಲಿ ಭಕ್ತರ ಹರಕೆಯ ಮಹಾಪೂಜೆ ಗರುಡೋತ್ಸವ ಬ್ರಹ್ಮೋತ್ಸವ ಪಾಲಕಿ ಉತ್ಸವ ಇತ್ಯಾದಿಗಳು ಚೈತ್ರ ವೈಶಾಖ ಮಾಸದಲ್ಲಿ ಒಂದು ತಿಂಗಳು ವಸಂತೋತ್ಸವ, ಅಂತೆಯೇ ಕಾರ್ತಿಕ ಮಾಸದಲ್ಲಿ ಉದಯ ಕಾಲದ ಮೊದಲು ಪಶ್ಚಿಮ ಜಾಗರ ಪೂಜೆ ಇವೆಲ್ಲ ಭುವಿಯಲ್ಲಿನ್ನೆಲ್ಲೂ ಈ ವೈಭವ ಈ ಶಿಸ್ತು ಈ ರೀತಿ ಶಾಸ್ತ್ರೋಕ ನಡೆಯುವದನ್ನು ಕಾಣಲಾರೆವು.

ಈ ರೀತಿಯಲ್ಲಿ ಎಂಟುನೂರು ವರ್ಷಗಳ ತನಕ ಸ್ವಲ್ಪವೂ ಕ್ರಮ ತಪ್ಪದಂತೆ ನಡೆದು ಬಂದ ಶ್ರೀಕೃಷ್ಣ ಪೂಜಾ ಉತ್ಸವಗಳು ಯಂತ್ರದಂತೆ ನಡೆದುಕೊಂಡು ಬಂದಿವೆ ಎಂದರೆ ತಪ್ಪಾಗದು. ಯಂತ್ರೋದ್ಧಾರನೇ ಈ ಯಂತ್ರವಾಹಕನನ್ನು ಇಲ್ಲಿ ನಿಲ್ಲಿಸಿರಬೇಕು.

ಐತಿಹಾಸಿಕ ದೃಷ್ಟಿಯಿಂದ ಶ್ರೀ ಪರಶುರಾಮ ಸೃಷ್ಟಿಯಲ್ಲಿ ಬರಗಾಲ ಬಂದುದಕ್ಕೆ ದಾಖಲೆಯೇ ಇಲ್ಲ.

ಜಗತ್ತಿನ ಇತಿಹಾಸದಲ್ಲಿ ಉಡುಪಿಯಂತೆ ನಿತ್ಯವೂ ಸಾವಿರಾರು ಮಂದಿ ಶ್ರೋತ್ರಿಯರಿಗೆ ವೈದಿಕ ಲೌಕಿಕ ವಿದ್ಯಾರ್ಜನೆಯಲ್ಲಿ ನಿರತರಾದ ವಿದ್ಯಾರ್ಥಿಗಳಿಗೆ ಯಾತ್ರಿಕರಿಗೆ ಬಡಬಗ್ಗರಿಗೆ ನಿತ್ಯವೂ ಸಾವಿರಾರು ಮಂದಿಗೆ ಅನ್ನದಾನ ಇಂದಿನ ತನಕ ನಡೆದು ಬಂದಿರುವ ಕ್ಷೇತ್ರ, ಸದ್ವಿದ್ಯಾದಾನ ಇತ್ಯಾದಿಗಳು-ಅವ್ಯಾಹತವಾಗಿ ಎಂಟು ನೂರು ವರ್ಷಗಳಿಂದಲೂ ನಡೆದು ಬರುತ್ತಿರುವ ಕ್ಷೇತ್ರ ಬೇರಾವದು?

ಅತ್ಯಂತ ಶುದ್ಧವಾದ ವೈದಿಕ ಸಂಪ್ರದಾಯಗಳನ್ನು ಇಂದಿಗೂ ಕಾಪಾಡಿಕೊಂಡು ಸತ್ಸಿದ್ಧಾಂತ ಪ್ರಸಾರ ಕೇಂದ್ರವಾಗಿರುವ ಕ್ಷೇತ್ರ ಬೇರಾವದು?

ಸರ್ವೋತ್ತಮನಾದ ಶ್ರೀಕೃಷ್ಣ ಎಂಟುನೂರು ವರ್ಷಗಳಿಂದಲೂ ಬಾಲ ಬ್ರಹ್ಮಚಾರಿಗಳಾದ ಯತಿಗಳಿಂದ ಪೂಜಿತನಾದ ಮೂರ್ತಿ ಇಲ್ಲಿಲ್ಲದೆ ಇನ್ನೆಲ್ಲಿದ್ದಾನೆ!



ತೆಪ್ಪೋತ್ಸವ

ಈ ಪುಸ್ತಕದಲ್ಲಿ ಪುಟ 3ರಲ್ಲಿ ಪ್ರಕಟವಾದ ಉಡುಪಿ ಶ್ರೀ ಕೃಷ್ಣನ ಪಡಿಯಚ್ಚು ಕಲ್ಯಾಣಪುರದ ಡಾ। ಪಿ. ಗುರುರಾಜ ಭಟ್ಟರ ಕೃಪೆ.
ಇತರ ಪುಟಗಳಲ್ಲೆಲ್ಲಾ ಪ್ರಕಟವಾದ ಪಡಿಯಚ್ಚುಗಳನ್ನು ಉಡುಪಿಯ ಶ್ರೀ ಕಾಣಿಯೂರು ಮಠಾಧೀಶರಾದ ಶ್ರೀ ಶ್ರೀ ವಿದ್ಯಾವಾರಿನಿಧಿ ತೀರ್ಥ ಶ್ರೀಪಾದಂಗಳವರು ಕರುಣಿಸಿರುವರು.

(–ಸಂ)

**ಸಮಾರೋಪಣವು:**

ಶ್ರೀ ಕೃಷ್ಣ ಮಠದಲ್ಲಿ ನಡೆಯುವ ನವವಿಧ ಪೂಜಾದಿಗಳೂ ಕಣ್ಮನಗಳಿಗೆ ಹಬ್ಬವನ್ನು ನೀಡುತ್ತವೆ. ಅನ್ನ ಬ್ರಹ್ಮನ ಮಠದಲ್ಲಿ ಅಲ್ಲದೆ ಅನ್ನಗತ ಪ್ರಾಣರಾದ ನಾವು ಇನ್ನೆಲ್ಲಿ ಈ ವೈಭವವನ್ನು ಈ ಲೋಕದಲ್ಲಿ ಈ ಕಂಗಳಲ್ಲಿ ಕಂಡೇವು? ರಜತಪೀಠ ಕ್ಷೇತ್ರದಲ್ಲಲ್ಲದೆ ಬೇರೆಲ್ಲಿ ಈ ರೀತಿ ಶಿಸ್ತು! ಉಡುಪ (ಚಂದ್ರ)ನ ಪುರದಲ್ಲಲ್ಲದೆ ಬೇರೆಲ್ಲಿ ಪೂರ್ಣಚಂದ್ರನಾದ ಶ್ರೀಕೃಷ್ಣನ ಸಾಕ್ಷಾತ್ ದರ್ಶನ ಸಾಧ್ಯ? ಮಹದಾನಂದಪ್ರದನೂ ಶ್ರೀಮದಾನಂದತೀರ್ಥವರದನೂ ಆದ ಶ್ರೀಕೃಷ್ಣನನ್ನು ಏನೆಂದು ಕೊಂಡಾಡಿ ಸ್ತುತಿಸಬಲ್ಲೆವು. ಎಷ್ಟೆಂದು ವರ್ಣಿಸಿ ಮುಗಿಸಬಲ್ಲೆವು!

ನವೀನ ಸಂಶೋಧಕರ ಉದ್ಗಾರಗಳು ಏನೇ ಇದ್ದರೂ ರಜತಪೀಠಪುರ ಮಾಹಾತ್ಮ್ಯವನ್ನು ಬರೆದವರು ಸಚ್ಛಾಸ್ತ್ರಜ್ಞರೂ ಶ್ರೀಮದಾನಂದ ತೀರ್ಥರ ಭಕ್ತಶ್ರೇಷ್ಠರಲ್ಲೊಬ್ಬರೂ ಆಗಿದ್ದರೆಂಬ ವಿಚಾರದಲ್ಲಿ ಸಂತ್ಸಂಪ್ರದಾಯ ಶರಣರಾದ ವಿದ್ವಾಂಸರ್ಯಾರಿಗೂ ಅನುಮಾನ ಉಳಿಯಲಾರದು. ಸಂಶೋಧನೆಗೆ ಕೊನೆಯಿಲ್ಲ. ಸಂದೇಹ ನಿವೃತ್ತಿಯಾದರೆ ಸಾಕು.

'ಈ ಸೊಬಗು ಇನ್ಯಾವ ಕ್ಷೇತ್ರದಲಿ ಉಂಟು
ವಾಸುದೇವ ಮುನಿಯಿಂದ ಕಾರಣವು ಇಲ್ಲುಂಟು।'

—ಶ್ರೀ ವಿಜಯದಾಸರು

'ಉಡುಪಿಯ ಕೃಷ್ಣನ ಸಡಗರ ನೋಡುವ
ನಡಿಯೇ ನಾರೀಮಣಿ!'

—ಶ್ರೀ ಸುರಪುರದ ಆನಂದದಾಸರು

'ಉಡುಪಿ ಕೃಷ್ಣ ಪೊಡವಿಗೊಡೆಯ
ಬಿಡದೆ ನಿನ್ನ ಅಡಿಗೆರಗುವೆ।'

—ಶ್ರೀಹಂಡೆ ಶ್ರೀಪಾದದಾಸರು

ನಾವು ಉಡುಪಿಯವರು ಶ್ರೀಕೃಷ್ಣನ ಪಾದಕಿಂಕರರ ಕಿಂಕರರ ಲೆಂಕರರ ಲೆಂಕರರು ಎಂದುಕೊಳ್ಳುವದೇ ಮಹಾಸೌಭಾಗ್ಯ.

ಶ್ರೀಭಾರತೀಶಾರ್ಪಣಮಸ್ತು

ಪರಿಶಿಷ್ಟ: 'ಅನ್ನ ದಾನಕ್ಕಿಂತ ಇನ್ನು ದಾನಗಳುಂಟೆ!' ಸನಾತನ ಧರ್ಮಗಳು ತದನುಸಾರಿಗಳಾದ ಶಾಸ್ತ್ರ ಪುರಾಣಾದಿಗಳಲ್ಲಿ ಮಾತ್ರವಲ್ಲ ಎಲ್ಲ ವಿಚಾರವಾತರ ದೃಷ್ಟಿಯಲ್ಲೂ ಅನ್ನದಾನ ಬಹುಶ್ರೇಷ್ಠ ದಾನವೆಂಬ ವಿಚಾರದಲ್ಲಿ ಏಕಾಭಿಪ್ರಾಯ್ಯ ವಿದೆ ಎನ್ನಬಹುದು.

ಅನ್ನನಾಮಕನಾದ ಭಗವಂತನು ಅನ್ನದಾನದಿಂದ ಸಂತುಷ್ಟನಾಗುವಂತೆ ಬೇರಾವುದರಿಂದಲೂ ಸಂತುಷ್ಟನಾಗಲಾರನು.

ಎಲ್ಲರೂ ಹೊಟ್ಟೆಗಾಗಿ ಶ್ರಮಿಸಿಯೇ ಶ್ರಮಿಸುತ್ತಾರೆ, 'ಎಲ್ಲಾರೂ ಮಾಡು ವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂದಿರುವ ಶ್ರೀ ಕನಕದಾಸರ ಮಾತಿ ನಲ್ಲಿ ಪ್ರಾಣಿಗಳೆಲ್ಲಾ ಅನ್ನಕ್ಕಾಗಿ ಯತ್ನಿಸಿಯೇ ಯತ್ನಿಸುತ್ತಾರೆ ಎಂಬ ಸತ್ಯ ಸಾಕ್ಷಾತ್ಕಾರವಾಗಿದೆ.

ಹಸಿದವರಿಗೆ, ವಿದ್ಯಾರ್ಥಿಗಳಿಗೆ, ಶ್ರೋತ್ರಿಯರಿಗೆ, ದೀನದಲಿತರಿಗೆ, ಅಂಗ್ಯ ವಿಕಲರಿಗೆ ಅನ್ನದಾನ ಮಾಡುವದು ಇವೆಲ್ಲ ಅನ್ನದಾನ ಮಾಡುವ ವಿಚಾರದಲ್ಲಿ ಹೆಚ್ಚು ಫಲಪ್ರದಗಳೆನ್ನ ಬಹುದಾದರೂ ಯಾವ ಪ್ರಾಣಿಮಾತ್ರಕ್ಕೂ ಅನ್ನದಾನ ಮಾಡುವದರಿಂದ ಮಹತ್ಫಲವಿದ್ದೇ ಇದೆ.

ಇನ್ನಾವ ದಾನದಿಂದಲೂ ಒಮ್ಮೆಗೇ ಆದರೂ ಸಂಪೂರ್ಣ ತೃಪ್ತಿ ಪಡಿಸಲು ಸಾಧ್ಯವಾಗದೇ ಹೋದರೂ ಅನ್ನದಾನದಿಂದ ಸಾಧ್ಯ.

ಅನ್ನದಾನ ಮಾಡಿದವನ ಶ್ರಮವೂ ವಿಶೇಷ ಸಾರ್ಥಕವಾಗಿ ದಾನ ಪಡೆ ದವನೂ ಅನ್ನದಿಂದ ತೃಪ್ತನಾಗಿ ಸುಜ್ಞಾನಾನ್ನ ಸಂಪಾದನೆಗಾಗಿ ಶ್ರಮಿಸುತ್ತ ಒಂದರೆ ದಾನಿಯೂ ಪಾತ್ರನೂ ಇಬ್ಬರೂ ವಿಶೇಷ ಕೃತಾರ್ಥರಾಗುವರು.

ಈ ಎಲ್ಲ ಕಾರಣಗಳಿಂದ ಸರ್ವಜ್ಞರಾದ ಶ್ರೀಮದಾನಂದತೀರ್ಥರು ಶಾಸ್ತ್ರದಲ್ಲಿ ಕಲಿಯುಗದಲ್ಲಿ ಅನ್ನದಾನಕ್ಕೆ ವಿಶೇಷ ಸುಫಲವನ್ನು ಹೇಳಿರುವದ ರಿಂದ ಅನ್ನಬ್ರಹ್ಮನಾದ ಶ್ರೀಕೃಷ್ಣನನ್ನು ಉಡುಪಿಯಲ್ಲಿ ಪ್ರತಿಷ್ಠಿಸಿ ಜಗತ್ತಿನ ಇತಿಹಾಸದಲ್ಲೇ ಇನ್ನೆಲ್ಲೂ ಕಾಣಸಿಗದಂಥ ಶುದ್ಧಾನ್ನದಾನದ ಸುಪದ್ಧತಿಯನ್ನು ಹಾಕಿಕೊಟ್ಟರು,

ನಿತ್ಯವೂ ಸಹಸ್ರಾರು ಮಂದಿಗೆ ಶುದ್ಧಾನ್ನದಾನ ೮೦೦ವರ್ಷಗಳ ಭವ್ಯ ಇತಿಹಾಸ ಉಡುಪಿಗೆ ಮೀಸಲು ಶ್ರೀಕೃಷ್ಣನಿಗೇ ಅರ್ಪಣೆ.

# ಕೆಮ್ಮಣ್ಣೂರಿನ ಶ್ರೀವಿಷ್ಣುಮೂರ್ತಿ ದೇವಾಲಯ

—ರಮಣ ಅಂಬಲಪಾಡಿ

"ವಿಷ್ಣೋಃ ಸಕಾಶಾದುದ್ಭೂತಂ ಜಗತತ್ರೈವ ಚ ಸ್ಥಿತಂ ।
ಸ್ಥಿತಿ ಸಂಯಮನಃ ಕರ್ತಾಸೌ ಜಗತೋಸ್ಯ ಜಗಚ್ಚಸಃ ॥

'ಜಗತ್ತು ವಿಷ್ಣುಮಯ' ಎನ್ನುವ ಆಧ್ಯಾತ್ಮಿಕ ಪ್ರಜ್ಞೆಯು ಆಸ್ತಿಕರಲ್ಲಿ ತುಂಬಿರುವುದರಿಂದ, ವಿಷ್ಣು ಆರಾಧನೆಯು ಜನಜೀವನದಲ್ಲಿ ಅನಾದಿಯಿಂದಲೂ ಹಾಸುಹೊಕ್ಕಾಗಿದೆ. ಇಂದು ಜಗತ್ತು ವೈಜ್ಞಾನಿಕ ಸತ್ಯ ದರ್ಶನ ಪಥದಲ್ಲಿ ಸಾಗುತ್ತಿದ್ದರೂ ವಿಷ್ಣು ಆರಾಧನೆ ಮತ್ತು ವಿಷ್ಣು ದೇವಾಲಯಗಳು ಯಾವೊಂದೂ ಸಂದಿಗ್ಧತೆಗೆ ಸಿಲುಕದೆ, ಜನರಲ್ಲಿ ಭಕ್ತಿಯ ಕಾರಂಜಿಯನ್ನು ಚಿಮ್ಮಿಸುತ್ತಿರುವುದು ಸನಾತನ ಪರಂಪರೆಯ ವೈಶಿಷ್ಟ್ಯ. ಕೆಮ್ಮಣ್ಣೂರಿನ ಶ್ರೀ ವಿಷ್ಣುಮೂರ್ತಿ ಮತ್ತು ಶ್ರೀ ವಿಷ್ಣುಮೂರ್ತಿ ದೇವಾಲಯವು ಇಂಥ ವೈಶಿಷ್ಟ್ಯಗಳಲ್ಲಿ ಒಂದು.



## ಪ್ರಶಾಂತ ವಾತಾವರಣ

ಕೆಮ್ಮಣ್ಣೂರಿನ ಶ್ರೀ ವಿಷ್ಣುಮೂರ್ತಿ ದೇವಾಲಯವು ರಜತಪೀಠ ಪುರದ (ಉಡುಪಿ) ಶ್ರೀಕೃಷ್ಣನಿಗೆ ಹತ್ತಿರವಿರುವ ವಿಷ್ಣು ದೇವಾಲಯ. ಉಡುಪಿಯಿಂದ ಹೆಚ್ಚುಕಡಿಮೆ 5ಕಿ.ಮೀ. ದೂರದಲ್ಲಿ ಅಲೆವೂರು—ಉದ್ಯಾವರ ರಸ್ತೆಯಲ್ಲಿ ಬ್ರಹ್ಮಸ್ಥಾನ ಪಂಚಾಯತು ಆಫೀಸಿನ ಹತ್ತಿರ ದಕ್ಷಿಣಕ್ಕೆ ತಿರುಗುವ ರಸ್ತೆಯಲ್ಲಿ ಮುಂದಕ್ಕೆ ಹೋದರೆ, ಪ್ರಕೃತಿಯ ನೀರವ ತಾಣದಲ್ಲಿ ಪ್ರಾಚೀನ ಆಶ್ರಮದ ನೆನಪು ತರುವ ವಾತಾವರಣದಲ್ಲಿ ಶ್ರೀ ವಿಷ್ಣುಮೂರ್ತಿ ದೇವಾಲಯವು ಭಕ್ತಿ ಮುಕ್ತಿಗಳ ನೆಲೆಯಾಗಿ ಕಂಗೊಳಿಸುತ್ತಿದೆ,



## ಸುಂದರ ಮೂರ್ತಿ

ನಿಜವಾಗಿಯೂ ಕೆಮ್ಮಣ್ಣೂರಿನ ಶ್ರೀ ವಿಷ್ಣುಮೂರ್ತಿಯು " ನಮಸ್ತೆ ಸರ್ವ ಭೂತಾಯ ಶಂಖ ಚಕ್ರ ಗದಾಧರ ಮಾಮುದ್ಧರಾಸ್ಮಾದಜ್ಞಾನಾದ್ಯತ್ತಂ ತ್ವತ್ತೋಹಂ

ಪೂರ್ವಮುತ್ತಿತಾ। ತ್ವಾಮಾರಾಧ್ಯ ಪರು ಬ್ರಹ್ಮ ಯಾತಾಮುಕ್ತಿ ಮುಮುಕ್ಷವಃ" ಕುರಗಳಲ್ಲಿ ಶಂಖ, ಚಕ್ರ, ಗದಾ, ಮತ್ತು ಪದ್ಮಗಳನ್ನು ಹಿಡಿದುಕೊಂಡು ನಿಂತಿರುವ ಹೆಚ್ಚು ಕಡಿಮೆ ಮೂರು ಅಡಿ ಎತ್ತರದ ಮೂರ್ತಿಯು ನಂಬಿದ್ದ ಭಕ್ತರ ಇಷ್ಟಾರ್ಥವನ್ನು ಪೂರೈಸುವ, ಸಂಕಷ್ಟ ಪರಿಹರಿಸುವ ಭಕ್ತಪರಾಧೀನ.

### ಪ್ರಾಚೀನ ದೇವಾಲಯ

ಈ ದೇವಾಲಯವು ದಕ್ಷಿಣ ಕನ್ನಡದ ಪ್ರಾಚೀನ ವಿಷ್ಣುದೇವಾಲಯಗಳಲ್ಲಿ ಒಂದು. ಶಾಸನ, ಐತಿಹ್ಯಗಳಿಂದ ದೇವಾಲಯದ ಕಾಲ 4–5ನೇ ಶತಮಾನ ಎನ್ನಬಹುದು. ಹಿಂದೆ ಈ ದೇವಾಲಯವು ಜೈನ ಪಾಳೆಗಾರರ ಆಡಳಿತಕ್ಕೆ ಒಳಪಟ್ಟಿತ್ತು. ಈತ ಬಂಟರ ಸ್ತ್ರೀಯನ್ನು ವಿವಾಹವಾಗಿದ್ದ. ಜೈನ ಪಾಳೆಗಾರನ ನಿಧನದ ಮೇಲೆ ಅಧಿಕಾರಕ್ಕೆ ಬಂದ ಆತನ ಮಕ್ಕಳು ಈ ದೇವಾಲಯದ ಆಡಳಿತೆದಾರರಾದರು. ದೇವಾಲಯದ ಪೂಜೆಯು ಕ್ರಮಪ್ರಕಾರ ಜರಗಲು ಪಾಳೆಯಗಾರನ ಮಕ್ಕಳು ತರಿಸಿದ್ದ ಬ್ರಾಹ್ಮಣ ಕುಟುಂಬದವರೇ ಇಂದಿಗೂ ದೇವಾಲಯದ ಪೂಜೆ ಮಾಡುತ್ತಿದ್ದಾರೆ.

### ಶಕ್ತಿಪ್ರಧಾನ ದೇವಾಲಯ

ಸುತ್ತಲೂ ಪೌಳಿ, ಎದುರಲ್ಲಿ ತಾಮ್ರದ ಧ್ವಜಸ್ತಂಭ, ಬಲಿಕಲ್ಲು, ಮತ್ತು ಸರೋವರಗಳಿಂದ ಕೂಡಿರುವ ಈ ಗ್ರಾಮದೇವಾಲಯದಲ್ಲಿ ತೋಟತ್ತಿಲ್ಲಾಯರು ಮತ್ತು ಜೈನ ಪಾಳೆಯಗಾರರು ಆರಾಧ್ಯಮೂರ್ತಿಯನ್ನು ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಿದ್ದರು. ವೈಷ್ಣವ ಸಂಪ್ರದಾಯ ದೇವಾಲಯವಾದರೂ ಇಲ್ಲಿ ರಕ್ತೇಶ್ವರಿ, ಕ್ಷೇತ್ರಪಾಲ, ಅಜ್ಞಾತ ಗಣಪತಿ, ನಂದಿಕೇಶ ಮೊದಲಾದ ಶಕ್ತಿಪ್ರಧಾನ ದೇವತೆಗಳನ್ನೂ, ಪಂಜುರ್ಲಿ ಗುಳಿಗರನ್ನೂ ಕಾಣಬಹುದು.

### ಸಕಲದುರಿತ ಪರಿಹಾರಕ

ನಾಗಸಾನಿಧ್ಯವಿರುವ ನಾಗಾಲಯ, ಅದಕ್ಕೆ ಸಂಬಂಧಪಟ್ಟ ಬ್ರಹ್ಮಸ್ಥಾನವು ದೇವಾಲಯದ ವಾಯುವ್ಯದಲ್ಲಿದೆ. ಕಲಾಪೂರ್ಣವಾದ ಈ ಬ್ರಹ್ಮಸ್ಥಾನವು ಕಾರಣಿಕಗಳ ನೆಲೆ. ಬ್ರಹ್ಮಸ್ಥಾನದಲ್ಲಿ ದರ್ಶನವು ನಡೆಯುತ್ತಿದ್ದರೂ ಕ್ರಮೇಣ ನಿಂತುಹೋದ ಕಾರಣವು ಅಸ್ಪಷ್ಟವಾಗಿದೆ. ಇಲ್ಲಿ ಪ್ರಾರ್ಥನೆ, ದುರ್ಗಾಪಾರಾಯಣ ಬ್ರಾಹ್ಮಣ ಆರಾಧನೆಗಳು ಸಕಲದುರಿತ ಪರಿಹಾರಕ.

## ವಾರ್ಷಿಕ ಉತ್ಸವಾದಿಗಳು

ಹೆಚ್ಚಿನ ಸ್ಥಿರಾಸ್ತಿ, ಸಂಪತ್ತು ಮತ್ತು ನಿತ್ಯ ಕಾಣಿಕೆಗಳು ಬರದಿದ್ದರೂ, ಕ್ರಮಪ್ರಕಾರ ನಿತ್ಯಪೂಜೆ, ವಾರ್ಷಿಕ ಉತ್ಸವಾದಿಗಳು ಭಕ್ತರ ಮತ್ತು ಗ್ರಾಮಸ್ಥರ ಸಹಾಯ ಸಹಕಾರಗಳಿಂದ ಜರಗಲ್ಪಡುವುದು. ಕುಂಭಮಾಸದ ಪೌರ್ಣಮಿ ಧ್ವಜಾರೋಹಣ, ಬ್ರಾಹ್ಮಣ ಸಂತರ್ಪಣೆ, ರಾತ್ರಿ ರಂಗಪೂಜೆ, ಮೂರನೇ ದಿನ ರಥೋತ್ಸವ ಸಂಭ್ರಮದಿಂದ ನಡೆಯುವುದು.

## ಪ್ರಗತಿ ಪಥದಲ್ಲಿ

ಇಂದು ದೇವಾಲಯದ ಜೀರ್ಣೋದ್ಧಾರ ಕಾರ್ಯವು ನಡೆಯುತ್ತಿರುವುದು ಆಧ್ಯಾತ್ಮಿಕ ಪ್ರಜ್ಞೆಯ ಪ್ರತೀಕ. ಶ್ರೀ ವಿಷ್ಣುಮೂರ್ತಿಗೆ ನಿತ್ಯನೈವೇದ್ಯಕ್ಕಾಗಿ ಕೆಲವು ಗದ್ದೆಗಳನ್ನು ಧರ್ಮಸಾಧನವಾಗಿ ಬಿಟ್ಟು, ದೇವಾಲಯದ ತನಕ ರಸ್ತೆಯ ಅನುಕೂಲತೆ ಮಾಡಿರುವ ಮೊಕ್ತೇಸರ ಕೆ. ಗುರುರಾಜ ಭಟ್ಟರು ( ಪ್ರೋಪ್ರೈಟರ್ ಹೋಟೆಲ್ ಅಜಂತಾ, ಹುಬ್ಬಳ್ಳಿ) ಐದು ವರ್ಷಗಳ ಹಿಂದೆ ತಾಮ್ರ ಮುಚ್ಚಿದ ಧ್ವಜಸ್ತಂಭ, ಬಲಿಪೀಠಗಳನ್ನು ಮಾಡಿಸಿ ಅರ್ಪಿಸಿದ್ದರು. ಇವರ ಅಣ್ಣಂದಿರಾದ ಕೆ. ಪದ್ಮನಾಭ ಭಟ್ಟರು ದೇವಾಲಯದ ಒಳಗಿನ ಸುತ್ತನ್ನು ಶಿಲಾಮಯವಾಗಿ ಮುಚ್ಚಿಸಿಯೂ. ಕೆ. ಲಕ್ಷ್ಮಿನಾರಾಯಣ ಭಟ್ಟರ ಮಗ ಕೆ. ವಿಷ್ಣುಮೂರ್ತಿ ಭಟ್ಟರು ರಥಾಲಯವನ್ನೂ, ಶ್ರೀಯುತ ಪದ್ಮಸೆಟ್ಟರು ದಕ್ಷಿಣ ಪ್ರಾಕಾರವನ್ನು ಕಟ್ಟಿಸಿ, ದೇವಾಲಯದ ಜೀರ್ಣೋದ್ಧಾರ ಕಾರ್ಯದಲ್ಲಿ ಸಹಕರಿಸಿದ್ದರು.

— ೦೦೦ —

ಶ್ರೀ ಹರಿ ಭಕ್ತಾಗ್ರೇಸರರೂ ಪರಮ ಕರುಣೆಗಳೂ ಕಲ್ಪವೃಕ್ಷದಂತೆ ಬೇಡಿದ ಇಷ್ಟಾರ್ಥಗಳನ್ನು ಸ್ಮರಣ ಮಾತ್ರದಿಂದಲೇ ಕರುಣಿಸುತ್ತಿರುವ ಮಂತ್ರಾಲಯ "ಶ್ರೀ ರಾಘವೇಂದ್ರ ಗುರುಸಾರ್ವಭೌಮರ ತ್ರಿಶತಮಾನೋತ್ಸವ ಆಚರಣೆ ಯನ್ನು ಉಡುಪಿಯಲ್ಲಿ 1972ನೇ ಇಸವಿ ಜನವರಿ 22, 23, 24, ಈ ಮೂರು ದಿನಗಳಲ್ಲಿ ವೈಭವಪೂರಿತವಾಗಿ ಆಚರಿಸಲು ಶ್ರೀ ಹರಿ ವಾಯು ಗುರು ಗಳ ಪ್ರೇರಣಾನುಸಾರ ನಿಶ್ಚೈಸಿರುತ್ತೇವೆ, ಇದಕ್ಕೆ ಸರ್ವ ವಿಧದಿಂದಲೂ ಸಹಕಾರ ಸಹಾಯವನ್ನಿತ್ತು ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಶ್ರೀಮದಾನಂದ ತೀರ್ಥರ ಮತ್ತು ಭೈಷ್ಮೀಭಾಮಾ ಕರಾರ್ಚಿತ ಶ್ರೀ ಕೃಷ್ಣನ ಅನುಗ್ರಹ ಪಾತ್ರರಾಗಬೇಕಾಗಿ ವಿಜ್ಞಾಪಿಸುತ್ತೇವೆ.

ಈ ಸಂದರ್ಭದಲ್ಲಿ ಮಕ್ಕಳಿಂದ ದೇವರನಾಮ ಸ್ಪರ್ಧೆ ಉಪನ್ಯಾಸ ಸ್ಪರ್ಧೆ ಪ್ರಬಂಧ ಸ್ಪರ್ಧೆ ಏರ್ಪಡಿಸಿ ಮಕ್ಕಳಿಗೂ ಆಧ್ಯಾತ್ಮದ ಕಡೆ ಗಮನ ಹರಿಯು ವಂತೆಯೂ ಮತ್ತು ವಿದ್ವಾಂಸರಿಂದ ಉಪನ್ಯಾಸ ಹರಿಕಥೆಗಳನ್ನೂ ರಾತ್ರಿ ಮನರಂಜನಾ ಕಾಯಕ್ರಮಗಳನ್ನೂ ಏರ್ಪಡಿಸಿ ಸಂಸ್ಮರಣಾ ಗ್ರಂಥ ಒಂದನ್ನು ಬಿಡುಗಡೆ ಮಾಡಲು ಸಂಕಲ್ಪಿಸಿದ್ದೇವೆ.

## ಟೀಕೇಟು ವಿವರ

| | | | |
|---|---|---|---|
| ವಿಶೇಷ ತರಗತಿ | 100-00 | IIIನೇ...... | 10-00 |
| ಪ್ರಥಮ...... | 50-00 | ಪ್ರವೇಶ ದರ | 5-00 |
| IIನೇ........ | 25-00 | | |

ಸುಮಾರು 10 ಸಹಸ್ರಕ್ಕೂ ಮೇಲ್ಪಟ್ಟು ಖರ್ಚು ತಗಲ ಬಹುದು. ಸಜ್ಜನರಾದ ಭಗವತ್ ಭಕ್ತರು ತಾವೇ ತಿಳಿದು ಸಹಕರಿಸಬೇಕು. ಹಣ ಕಳು ಹಿಸುವವರು ಕೆಳಗಿನ ವಿಳಾಸಕ್ಕೆ ಕಳುಹಿಸಬಹುದು.

ವ್ಯವಸ್ಥಾಪಕರು.

**ಶ್ರೀ ರಾಘವೇಂದ್ರ ತ್ರಿಶತಮಾನೋತ್ಸವ ಸಮಿತಿ**
**ವಾಣೀ ಪ್ರಕಾಶನ ಕೆರೆಮಠ. ಉಡುಪಿ.**
ಪೋಸ್ಟ್ ಕ್ರೋಡಾಶ್ರಮ. ( S. K. )

ಮುದ್ರಕರು: ಮೆಜೆಸ್ಟಿಕ್ ಪ್ರೆಸ್, ಉಡುಪಿ


AJANTA